# ಆವರಣ ಕಾದಂಬರಿ : ಒಂದು ವಿಶ್ಲೇಷಣೆ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

೨೦೦೭.

ಮಾರ್ಗದರ್ಶಕರು
**ಡಾ॥ ಕುರುವ ಬಸವರಾಜ್**




ಸಂಶೋಧನಾ ವಿದ್ಯಾರ್ಥಿ
**ಅಪ್ಪು ಜಾಧವ**



**ಕಾವ್ಯ ಮಂಡಲ**
(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ನಂ. ೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-೫೬೦ ೦೦೪

199

# ಮಾರ್ಗದರ್ಶಕರ ಪ್ರಮಾಣ ಪತ್ರ

ಅಪ್ಪು ಜಾಧವ ಇವರು **"ಆವರಣ ಕಾದಂಬರಿ : ಒಂದು ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಮಾರ್ಗದರ್ಶಕರು**

[signature]

**(ಡಾ. ಕುರುವ ಬಸವರಾಜ್)**

ದಿನಾಂಕ : 22-12-2007
ಸ್ಥಳ : ಬೆಂಗಳೂರು

199

## ದೃಢೀಕರಣ ಪತ್ರ

**"ಆವರಣ ಕಾದಂಬರಿ : ಒಂದು ವಿಶ್ಲೇಷಣೆ"** ಎಂಬ ಶೀರ್ಷಿಕೆಯ ಈ ಎಂ.ಫಿಲ್. ನಿಬಂಧವನ್ನು ಸ್ವತಂತ್ರ ಅಧ್ಯಯನದ ಮೂಲಕ, ಡಾ. ಕುರುವ ಬಸವರಾಜ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕ

ASadav

**(ಅಪ್ಪು ಜಾಧವ)**

ದಿನಾಂಕ :

ಸ್ಥಳ : ಬೆಂಗಳೂರು

# ಪರಿವಿಡಿ

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಹುಟ್ಟಿಕೊಂಡ ಇಂಗ್ಲೀಷ್ ಕಾದಂಬರಿಗೆ, ಫ್ರೆಂಚ್ ಕ್ರಾಂತಿ, ಬೃಹತ್ ಕೈಗಾರಿಕೆಗಳ ಉಗಮ, ಶಿಕ್ಷಣ ಪ್ರಸಾರ, ನಗರೀಕರಣ, ಹೀಗೆ ಒಟ್ಟು ಯುರೋಪಿನಲ್ಲಿ ಬದಲಾಗುತ್ತಿದ್ದ ಸಾಮಾಜಿಕ ಸ್ಥಿತಿಗತಿಗಳು ಕಾರಣವಾಗಿದ್ದವು.[೧]

ಭಾರತೀಯ ಸಂದರ್ಭಕ್ಕೆ ಕಾದಂಬರಿ ಹೆಜ್ಜೆಯಿಟ್ಟದುದು ಕೂಡಾ ಮಹತ್ವದ ಸಂಗತಿ. ಪಾಶ್ಚಾತ್ಯರಲ್ಲಿ ಅದು ವೈಭವಕ್ಕೇರಿ, ಉಚ್ಛ್ರಾಯದ ಗಡಿರೇಖೆಗಳನ್ನು ಸ್ಪರ್ಶಿಸುತ್ತಿದ್ದ ಹೊತ್ತಿಗೆ ಎಂದರೆ ಹತ್ತೊಂಬತ್ತನೆಯ ಶತಮಾನದ ಕೊನೆಯ ಹೊತ್ತಿಗೆ–ಈಗ ಗ್ರಹಿತವಾಗಿರುವಂತೆ ತಮಿಳಿನ ಪಿಳ್ಳೈ ಅವರ ಪ್ರತಾಪ ಮೊದಲಿಯಾರ ಚರಿತ್ರಂ ೧೮೭೯ ರ ಮೊದಲ ಕಾದಂಬರಿ ಕಾಣಿಸಿಕೊಂಡಿತು. ಕಾದಂಬರಿಯ ನಿರೂಪಣಾ ವಿಧಾನಕ್ಕೆ ಸಂವಾದಿಯಾದಿ ರೀತಿಯೊಂದು ಹಿಂದಿನಿಂದಲೂ ನಮ್ಮಲ್ಲಿ ಪ್ರಚಲಿತದಲ್ಲಿತ್ತೆಂದೂ ಅದು ಬೆಳೆದುಕೊಂಡು ಆಧುನಿಕ ಕಾದಂಬರಿಯ ಹಂತಕ್ಕೆ ಬಂದಿತೆಂದೂ ಕೆಲವರು ಭಾವಿಸುವುದುಂಟು. ದಂಡಿಯ ದಶಕುಮಾರ ಚರಿತೆ, ಸುಬಂಧುವಿನ ವಾಸವದತ್ತಾ, ಬಾಣಭಟ್ಟನ ಕಾದಂಬರಿ ಕೃತಿಗಳನ್ನು ಪ್ರಾಚೀನ ಕಾಲದ ಕಾದಂಬರಿಗಳೆಂದು ಗುರುತಿಸುವುದು ಕುತೂಹಲಕರ. ಏನಿದ್ದರೂ ಇದು ಕಾದಂಬರಿಯ ಪಾಶ್ಚಾತ್ಯ ಮೂಲ ನಿರಾಕರಿಸಿ, ದೇಶಿಯ ನೆಲೆಯ ಹುಡುಕಾಟವಾಗಿ ಗಮನ ಸೆಳೆಯುತ್ತದೆ. ಆದರೆ ವಸ್ತುಸ್ಥಿತಿ–ಎಂದರೆ, ಆಧುನಿಕ ಭಾರತೀಯ ಕಾದಂಬರಿಯು ಬಾಹ್ಯ ಪ್ರೇರಣೆಗಳನ್ನು ಪಡೆದುಕೊಂಡು ತಲೆಯೆತ್ತಿ, ಬರುಬರುತ್ತ ಸ್ವಂತ ಮತ್ತು ಪ್ರಯೋಗಗಳ ಸ್ವಾತಂತ್ರ್ಯದಲ್ಲಿ ಅಸ್ತಿತ್ವವನ್ನು ಕಂಡುಕೊಂಡುದು. ಇದಕ್ಕೆ ಭಾರತೀಯ ಸಾಮಾಜಿಕ ಬದಲಾವಣೆಗಳು, ಹೊಸ ಶಿಕ್ಷಣ ಮತ್ತು ಆಧುನಿಕ ಚಿಂತನೆಗಳು ಪ್ರಧಾನ ಕಾರಣಗಳು. ವಸಾಹತುಶಾಹಿಯ ಅನುಭವಗಳ ಹಿನ್ನೆಲೆಯಲ್ಲಿ ಬೆಳೆದು ನಿಂತ ರಾಷ್ಟ್ರೀಯತೆ ಪ್ರಜ್ಞೆ, ಆ ಮೂಲಕ ನಡೆದ ಸ್ವಾತಂತ್ರ್ಯ ಹೋರಾಟದ ಸ್ವದೇಶಿ ಆಂದೋಲನದ ತೀವ್ರತೆ ಕೂಡ ಇದಕ್ಕೆ ಪೂರಕವಾಗಿ ಚಾಲನೆ ನೀಡಿದವು. ಏಕೆಂದರೆ ಭಾರತೀಯರ ಸಮೂಹ ಪ್ರಜ್ಞೆ ಸಂಘಟಿತಗೊಂಡು, ಕ್ರಿಯಾಶೀಲವಾದುದೇ ಈ ಕಾಲದಲ್ಲಿ.[೨]

ಕನ್ನಡದ ಕಾದಂಬರಿಯೇನೂ ಇದಕ್ಕೆ ತೀರ ಭಿನ್ನವಾಗಿರಲಿಲ್ಲ. ಆರಂಭದಲ್ಲಿ ಅನುವಾದಗೊಂಡ ಬಂಗಾಲಿ, ಮರಾಠಿ ಕಾದಂಬರಿಗಳು ಸಾಮಾಜಿಕ ಸಮಸ್ಯೆಗಳ ಜಟಿಲತೆಯನ್ನು, ರಾಷ್ಟ್ರೀಯತೆಯ ತೀವ್ರತೆಯನ್ನು, ಸ್ವಾತಂತ್ರ್ಯದ ಹಂಬಲವನ್ನು ಓದುಗರಿಗೆ

ಮನಗಾಣಿಸಿ, ಸಾರ್ವತ್ರಿಕ ಎಚ್ಚರವನ್ನುಂಟು ಮಾಡಿ ಸಾಮಾಜಿಕ ವಾಸ್ತವತೆಯನ್ನು ಹೊಂದಿದ್ದವು ಮತ್ತು ಧಾರ್ಮಿಕ ವಿಡಂಬನೆಯ ಮೂಲಕ ಅವು ಸಾಮಾಜಿಕ ಬದಲಾವಣೆಯನ್ನು ಎತ್ತಿ ಹಿಡಿದವು. ರೂಢಿ ಮೂಲ ಅನಿಷ್ಟವಾದ ಸಂಪ್ರದಾಯಗಳನ್ನು ವಿಡಂಬಿಸುವ, ಪ್ರಶ್ನಿಸುವ ಮೂಲಕ, ಭಾರತೀಯ ಪರಂಪರಾಗತ ಮೌಲ್ಯಗಳನ್ನು ಮರು ವಿವೇಚಿಸುವ ಅಗತ್ಯವನ್ನು ಒತ್ತಡವನ್ನು ಸೃಷ್ಟಿಸಿದವು. ಆದರೆ ಭೈರಪ್ಪನವರ 'ಆವರಣ' ಕಾದಂಬರಿಯಲ್ಲಿ, ಸಾಮಾಜಿಕ ಕಳಕಳಿಯಾಗಲಿ, ಸಾಮಾಜಿಕ ಬದಲಾವಣೆಗಳಾಗಲಿ, ರಾಷ್ಟ್ರೀಯತೆಯ ಪ್ರಜ್ಞೆ ಮೂಡಿಸುವುದಾಗಲಿ ಅಥವಾ ಸಾಮಾಜಿಕ ಸಮಸ್ಯೆಗಳಾಗಲಿ ಈ ಎಲ್ಲವುಗಳಿಂದ ಈ ಕಾದಂಬರಿ ದೂರವಾಗಿದೆ. ಬರೀ ಹಿಂದೂ ಮುಸ್ಲಿಂ ಎಂಬ ಎರಡು ಧರ್ಮಗಳ ಚಿತ್ರಣವನ್ನು ಚಿತ್ರಿಸಿ ಭೈರಪ್ಪನವರು-ಇದು ನನ್ನ ಎರಡನೆಯ ಐತಿಹಾಸಿಕ ಕಾದಂಬರಿ ಎಂದು ಹೇಳಿಕೊಂಡಿದ್ದಾರೆ. ಇದು ಯಾವ ರೀತಿ ಐತಿಹಾಸಿಕ ಕಾದಂಬರಿ? ಐತಿಹಾಸಿಕ ಘಟನೆಗಳು ಚಿತ್ರಿಸಿದ ಕಾರಣ ಇದು ಐತಿಹಾಸಿಕ ಕಾದಂಬರಿಯಾಗಲು ಸಾಧ್ಯವೇ? ಎಂಬ ಅನುಮಾನಕ್ಕೆ ಕಾರಣವಾಗಿದೆ. ಈ ಕೃತಿಯಲ್ಲಿ ಕೆಲವು ವಿಮರ್ಶಕರು ಭೈರಪ್ಪನವರು ಸಾಕ್ಷಿಸಮೇತವಾಗಿ ಆವರಣವನ್ನು ಚಿತ್ರಿಸಿದ್ದಾರೆ ಎನ್ನುತ್ತಾರೆ. ಇದು ಐತಿಹಾಸಿಕ ಕಾದಂಬರಿ ಎಂದು ವಿಶ್ಲೇಷಿಸಿದ ಸಂದರ್ಭಗಳಿವೆ.

ಹಾಗಾದರೆ ಕುವೆಂಪುರವರ ಪ್ರಸಿದ್ಧ ಕಾದಂಬರಿಗಳಾದ 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಅನೇಕ ಪಾತ್ರಗಳು ಪ್ರೀತಿ-ಪ್ರೇಮದಿಂದ ಕೂಡಿಕೊಂಡಿವೆ. ಉದಾಹರಣೆಗೆ-ಹೂವಯ್ಯ ಮತ್ತು ಚಿನ್ನಮ್ಮನ ಪಾತ್ರಗಳೇ ಆಗಿರಬಹುದು ಅಥವಾ ಕಾದಂಬರಿಗಳಲ್ಲಿಯ ಅನೇಕ ಸನ್ನಿವೇಶಗಳೇ ಆಗಿರಬಹುದು ಇವುಗಳಿಗೆಲ್ಲ ಸಾಕ್ಷಿ ಬೇಕೆ? ಭೈರಪ್ಪನವರ ಪ್ರಕಾರ ಯಾವುದೇ ಒಂದು ಕೃತಿ ಸಾಕ್ಷಿಸಮೇತವಾಗಿ ಐತಿಹಾಸಿಕ ಘಟನೆಗಳನ್ನು ಚಿತ್ರಿಸಿದ ತಕ್ಷಣ ಅದು ಐತಿಹಾಸಿಕ ಕಾದಂಬರಿ ಎಂದು ತಿಳಿದಿದ್ದು ಸರಿಯೇ? ಹೀಗಾಗಿ ಭೈರಪ್ಪನವರು 'ಆವರಣ'ದಲ್ಲಿ ಎರಡು ಪ್ರಬಲ ವರ್ಗಗಳನ್ನು ಚಿತ್ರಿಸಿ, ಸಂಘಪರಿವಾರದವರ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಿ ಕೈ ತೊಳೆದುಕೊಂಡಿದ್ದಾರೆ ಎನ್ನಬಹುದು.

**ಕೊನೆ ಟಿಪ್ಪಣಿಗಳು**

೧. ಗುರುಪಾದ ಮರಿಗುದ್ದಿ, ಕುವೆಂಪು ಕಾದಂಬರಿಗಳು, ೨೦೦೪, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ಪುಟ ೧.
೨. ಅದೇ ಪುಟ ೧.

## ಅಧ್ಯಾಯ ೧

## ಕಾದಂಬರಿಯ ಸ್ವರೂಪ ಮತ್ತು ವ್ಯಾಪ್ತಿ

ಭೈರಪ್ಪನವರ 'ಆವರಣ' ಕಾದಂಬರಿಯು ತುಂಗ-ಭದ್ರ ಆಣೆಕಟ್ಟೆಯ ಅತಿಥಿ ಗೃಹದಲ್ಲಿ ಲಕ್ಷ್ಮಿ ಮತ್ತು ಅಮೀರ ದಂಪತಿಗಳ ಪರಿಚಯದೊಂದಿಗೆ ಪ್ರಾರಂಭವಾಗಿದೆ. ಹೆಸರಿನಿಂದ ಅವರು ಬೇರೆ ಬೇರೆ ಮತಕ್ಕೆ ಸೇರಿದವರೆಂದು ಅನಿಸುತ್ತದೆ. ದಂಪತಿಗಳಿಬ್ಬರೂ ಪ್ರಗತಿಪರರೆ, ಆದರೂ ಅವರು ಸಂಪ್ರದಾಯವನ್ನು ಬಿಟ್ಟಿಲ್ಲ. ಹಿಂದೂ ಮತಕ್ಕೆ ಸೇರಿದ್ದ ಲಕ್ಷ್ಮಿಯು, ಇಸ್ಲಾಂ ಮತಕ್ಕೆ ಸೇರಿ ರಜಿಯಾ ಎಂದು ಹೆಸರು ಪಡೆದ ನಂತರವೇ ಮದುವೆಯಾಗಿದೆ. ಅಮೀರನು ಮಾತ್ರ ತನ್ನ ಮತಕ್ಕೆ ಅಂಟಿಕೊಂಡಿದ್ದಾನೆ.[೧]

ಪ್ರೊ॥ ಶಾಸ್ತ್ರಿಗಳು ಕ್ರಾಂತಿಕಾರರು, ಪ್ರಗತಿಪರರೂ ಎಂದು ತಮ್ಮನ್ನು ತಾವೇ ಘೋಷಿಸಿಕೊಂಡು ಮಹಾ ಮೇಧಾವಿ ಎನಿಸಿ ಪ್ರಚಾರಪ್ರೀಯರಾಗಿದ್ದರು. ಹೀಗೆ ವಂಚಕ ಬುದ್ಧಿಯುಳ್ಳ ಶಾಸ್ತ್ರೀಯ ಅವಕಾಶವಾದಿಯಾಗಿದ್ದರು.

ಲಕ್ಷ್ಮಿಯು ತನ್ನ ತಂದೆ ಸತ್ತ ವಿಚಾರ ಶಾಸ್ತ್ರೀಯ ಮೂಲಕ ತಿಳಿದು ಊರಿಗೆ ಹೋಗಿ ದೇವರ ಪೂಜಾರಿ ಶೇಷ ಶಾಸ್ತ್ರಿಗಳನ್ನು ಭೇಟಿಯಾಗಿ ನನ್ನ ತಂದೆ ಸಾಯುವಾಗಾದರೂ ನನ್ನನ್ನು ಕರೆಸಿಕೊಳ್ಳಬಹುದಿತ್ತಲ್ಲಾ ಎಂದು ತನ್ನ ದುಃಖವನ್ನು ವ್ಯಕ್ತಪಡಿಸುತ್ತಾಳೆ. ತೋಟಕ್ಕೆ ಹೋಗಿ ತಂದೆಯ ಸಮಾಧಿಗೆ ನಮಸ್ಕರಿಸಿ ನನ್ನನ್ನು ಕ್ಷಮಿಸಬೇಕು ಎಂದು ಬೇಡಿಕೊಳ್ಳುತ್ತಾಳೆ. ತಂದೆಯ ಚಿತಾಭಸ್ಮವನ್ನು ತಾನೇ ವಿಸರ್ಜಿಸಬೇಕು ಎಂದು ನಿರ್ಧರಿಸಿ ಶೇಷಶಾಸ್ತ್ರಿಗಳಿಗೆ ತಿಳಿಸುತ್ತಾಳೆ ಅವರು ಒಪ್ಪಿಕೊಳ್ಳುತ್ತಾರೆ.

ಆದರೆ ಪ್ರಾಯಶ್ಚಿತ್ತ ಮಾಡಿಕೊಂಡರೆ ಮಾಡಲು ಸಾಧ್ಯವಾಗುತ್ತದೆ ಎಂದು ಹೇಳುತ್ತಾರೆ. ಪ್ರಾಯಶ್ಚಿತ್ತ ಮಾಡಿಕೊಳ್ಳಲು ಲಕ್ಷ್ಮಿ ಒಪ್ಪಿ ಪ್ರಾಯಶ್ಚಿತ್ತ ಮಾಡಿಕೊಂಡು ತಂದೆಯ ಚಿತಾಭಸ್ಮವನ್ನು ನದಿಯಲ್ಲಿ ವಿಸರ್ಜಿಸಿದಳು.

ಲಕ್ಷ್ಮಿಯ ಮಗ ನಜೀರನು ದೊಡ್ಡವನಾಗಿ ಸೌದಿಗೆ ಹೋಗಿ ಕೆಲಸದಲ್ಲಿರುತ್ತಾನೆ. ಅವನು ಸೌದಿಯಲ್ಲಿದ್ದಾಗ ತಾಯಿಗೆ ಪತ್ರ ಬರೆದು ಅಲ್ಲಿಯ ಆಚಾರ-ವಿಚಾರ ನಡೆ-ನುಡಿ ಪದ್ಧತಿಯನ್ನು ತಿಳಿಸುತ್ತಾನೆ. ಅಲ್ಲಿ ವಂಚನೆ ಕಳ್ಳತನ ಇಲ್ಲವೇ ಇಲ್ಲವೆಂದು

ತಿಳಿಸುತ್ತಾನೆ. ಕಾರಣ ಕಠೋರವಾದ ಶಿಕ್ಷೆ ವಿಧಿಸುತ್ತಾರೆ. ಅಲ್ಲಿಯ ಚಿನ್ನವೂ ಪರಿಶುದ್ಧ. ತೆರಿಗೆಯ ಭಯವಿಲ್ಲ. ಮತ್ತು ಲಕ್ಷ್ಮಿಯ ಮಗ ಹಿಂದುಗಳನ್ನು ಜರಿಯುತ್ತಾನೆ. ಅದಕ್ಕೆ ಕಾರಣ ಅವನ ಅಜ್ಜ-ಅಜ್ಜಿ. ಬಾಲ್ಯದಲ್ಲಿ ಅವನು ಅವರ ಬಳಿಯೇ ಬೆಳೆಯುತ್ತಾನೆ. ಅವರು ಕೆಟ್ಟ ವಿಚಾರಗಳನ್ನು ಅವನ ತಲೆಯಲ್ಲಿ ತುಂಬಿದ್ದಾರೆ. ನಜೀರನಿಗೆ ತಾಯಿಯ ಕಡೆ ಸಂಬಂಧಿಕರು ಇದ್ದದ್ದನ್ನು ಹೇಳಿರುವುದೇ ಇಲ್ಲ. ಇದೆಲ್ಲ ಲಕ್ಷ್ಮಿಗೆ ಬಹಳಷ್ಟು ನೋವನ್ನುಂಟು ಮಾಡುತ್ತದೆ. ಆದರೂ ಲಕ್ಷ್ಮಿಯಾದರೂ ಹೇಳಬಹುದಿತ್ತಲ್ಲ? ಎಂದು ಅನಿಸುತ್ತದೆ.[3]

ಅಮೀರನು ಅಕ್ಬರ ಮಹಾನ ಮತ್ತು ರಾಷ್ಟ್ರವೀರ ಟಿಪ್ಪುವಿನ ಬಗ್ಗೆ ನಾಟಕ ಬರಿಯಲು ಲಕ್ಷ್ಮಿಗೆ ತಿಳಿಸುತ್ತಾನೆ. ಅವಳು ಮೊದಲು ಒಪ್ಪುತ್ತಾಳೆ. ಆದರೆ ಟಿಪ್ಪುವಿನ ಬಗ್ಗೆ ಅವಳ ತಂದೆಯು ಬರೆದ ಟಿಪ್ಪಣಿಗಳನ್ನು ಓದಿದ ಮೇಲೆ ಬರಿಯಲು ನಿರಾಕರಿಸುತ್ತಾಳೆ. ಇವನನ್ನು ರಾಷ್ಟ್ರವೀರನೆಂದು ಕರೆಯುದೇ ಎಂದು ಜಿಗುಪ್ಸೆ ಬರುತ್ತದೆ.

ಟಿಪ್ಪುವಿನ ಅಂದಿನ ಕಾಲಮಾನಕ್ಕೆ ತಕ್ಕಂತೆ ತಾಳಹಾಕಿ ಕುಣಿದಿದ್ದಾನೆ (ಮತಾಭಿಮಾನಕ್ಕೊ ಅದೇರೀತಿ ಮಾಡಿದ್ದಾನೆ) ಆದರೆ ಇವನದು ಮಿತಿಮೀರಿದೆ ಆದ್ದರಿಂದ ಇವನು ಅಪರಾಧಿ. ಅಲ್ಲದೆ ಅನ್ಯ ದೇಶಿಯರನ್ನು ಕರೆಸಿ ಅವರ ಮೂಲಕ ಇಸ್ಲಾಂ ರಾಜ್ಯವನ್ನೂ ಸ್ಥಾಪಿಸಹೊರಟಿರುವುದು ಮಹಾ ಅಪರಾಧ. ಇವನಿಗೆ ಕ್ಷಮೆಯೇ ಇಲ್ಲ. ಇವನನ್ನು ರಾಷ್ಟ್ರದ್ರೋಹಿ ಎಂದು ಕರೆದರೆ ಇಂದಿನ ಮುಸಲ್ಮಾನರಿಗೆ ಹಿಂದೂ ಸಾಹಿತ್ಯಗಳಲ್ಲಿಯೇ ಅತಿರಥ ಮಹಾರಥರೆಂದೆನಿಸಿಕೊಂಡವರಿಗೆ ಹೆಚ್ಚು ನೋವಾಗುತ್ತದೆ. ಅವರೇ ಸತ್ಯವನ್ನು ಮರೆಮಾಚಿ ಅವನನ್ನು ಅತ್ಯುನ್ನತ ಮಟ್ಟಕ್ಕೆ ಏರಿಸಿದ್ದಾರೆ.[4]

ವಿಜಯನಗರ ಪತನಕ್ಕೆ ಶೈವ ವೈಷ್ಣವರು ಕಿತ್ತಾಟವೇ ಕಾರಣವಲ್ಲದೆ, ಮುಸಲ್ಮಾನರು ಕಾರಣವಲ್ಲವೆಂದು (ಸ್ಪಷ್ಟಪಡಿಸುತ್ತಾನೆ). ಶಾಸ್ತ್ರಿಯು ಲಕ್ಷ್ಮಿಗೆ ಹೇಳಿ ದಾರಿತಪ್ಪಿಸುತ್ತಾನೆ. ಇದು ಇಸ್ಲಾಂ ಪಕ್ಷಪತಿಯಾದ ಶಾಸ್ತ್ರಿಯ ಅಭಿಪ್ರಾಯ ಅವರ ಹೇಳಿಕೆಯಂತೆ ಅಲ್ಲಿ ಕೇವಲ ವೈಷ್ಣವ ವಿಗ್ರಹಗಳಷ್ಟೇ ಭಗ್ನವಾಗಿಲ್ಲ. ಶೈವ ದೇವಾಲಯಗಳೂ ನಾಶವಾಗಿವೆ. ಅದಕ್ಕೆ ಭೈರಪ್ಪನವರು ಸಾಕ್ಷಿಯನ್ನು ಒದಗಿಸಿದ್ದಾರೆ. ಇದು ಲಕ್ಷ್ಮಿಯು ಶಾಸ್ತ್ರಿಗೆ ತಿಳಿಸಿದಾಗ, ಕಲಾಕಾರರು ಸಂಶೋಧನೆಯಲ್ಲಿ ತೊಡಗಬಾರದಮ್ಮಾ ಅದರಿಂದ ಕಲೆಯು ಬಾಡುತ್ತದೆ ಎಂದು ಹೇಳುತ್ತಾನೆ. ಅದೂ ಅಲ್ಲದೇ ನೀ ಬಾಡುವುದು ನನಗೆ ಇಷ್ಟವಿಲ್ಲವೆಂದು ಅವಳ ಬಗ್ಗೆ ಬಹಳ ಕಾಳಜಿ ಇರುವವನಂತೆ ನಟಿಸಿ ಮುಂದೆ ಅವನೇ ಅವಳನ್ನು ಬಾಡುವಂತೆ ಮಾಡುತ್ತಾನೆ. ಇಂತಹ ಕೆಟ್ಟ ಆಲೋಚನೆಗಳ ಜನ ಸಮಾಜದಲ್ಲಿ ಇರುವವರೆಗೆ ಸತ್ಯವನ್ನು ಹೊರಹಾಕುವುದು ಬಹು ಪ್ರಯಾಸದ ಕೆಲಸ.

ಯುದ್ಧದಲ್ಲಿ ಸೋತವರನ್ನು ಮುಸ್ಲಿಮರು ಬಹುಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದರು. ಗಂಡು-ಹೆಣ್ಣ ಇಬ್ಬರನ್ನೂ ಗುಲಾಮರನ್ನಾಗಿ ಮಾಡಿಕೊಳ್ಳುತ್ತಿದ್ದರು. ಅದರಲ್ಲೂ ದೇವಗಢದ ಯುವರಾಜನನ್ನು ನಪುಂಸಕನನ್ನಾಗಿ ಮಾಡಿ ಹೆಣ್ಣಿನಂತೆ ಭೋಗಿಸುತ್ತಿದ್ದರು. ಒಬ್ಬರಲ್ಲ

ಅನೇಕರು ಹಿಂದೂಗಳಿಗೆ ಅಧಿಕ ಕಂದಾಯ ವಿಧಿಸುತ್ತಿದ್ದರು. ಕಂದಾಯ ಕಟ್ಟದವರು ಗುಲಾಮರಾಗಬೇಕಿತ್ತು.[೪]

ಇಂತಹ ಕೆಟ್ಟ ನೀತಿ ನಿಯಮಗಳಿದ್ದ ಇಸ್ಲಾಂ ಮತ ಹೇಗೆ ಶ್ರೇಷ್ಠವಾಗಲು ಸಾಧ್ಯ? ಪ್ರೊ. ಶಾಸ್ತ್ರಿಯಂಥವರಿಗೆ ಯಾವ ಹುಚ್ಚು ಹಿಡಿದಿದೆ ಎನ್ನಬೇಕು?

ಬಾಬರ ಮಸೀದಿ ಧ್ವಂಸವಾಗಿ ಅನೇಕ ವರ್ಷಗಳು ಕಳೆದುಹೋದವು. ಆದರೂ ಅದನ್ನೆ ಇನ್ನೂ ಜೀವಂತವಾಗಿ ಇಟ್ಟಿದ್ದಾರೆ. ಜೀವಂತವಾಗಿ ಇಟ್ಟವರು ನಮ್ಮವರೇ ಹೊರತು ಅವರಲ್ಲ. ಆದರೆ ಬಾಬರನು ಕಟ್ಟಿದ್ದು ಹೇಗೆ ಎಂಬುದನ್ನು ಯಾರೂ ಚಿಂತಿಸುವುದಿಲ್ಲ. ಅವನು ಹೇಗೋ ಕಟ್ಟಿರಬೇಕು ಎಂದು ಊಹಿಸುತ್ತಾರೆ. ರಾಮ ಮಂದಿರವನ್ನು ಕೆಡವಿ ಕಟ್ಟಿದ್ದಾನೆ. ಎರಡನ್ನು ಕಟ್ಟಿ ಒಂದಾಗಿ ಬಾಳಬೇಕು ಎಂದು ಯಾರೂ ಚಿಂತಿಸುವುದಿಲ್ಲ. ಮುಸ್ಲಿಂರಲ್ಲಿ ಹೆಣ್ಣು ಗಂಡಿಗೆ ಸಮಾನತೆ ಇಲ್ಲ. ಹೆಣ್ಣು ಕೇವಲ ಅಡುಗೆಮನೆ ಮತ್ತು ಮಲಗುವ ಮನೆಗೆ ಸೀಮಿತವಾಗಿರಬೇಕೆಂದು ಅವರು ಬಯಸುತ್ತಾರೆ.

ಮೊಘಲರು ಹಿಂದುಗಳನ್ನು ಕಾಫಿರ್‌ರು, ಧರ್ಮ ಲಂಡರು, ದುರ್ಬಲರು, ಒಗ್ಗಟ್ಟಿಲ್ಲದವರು ಎಂದು ಜರಿಯುತ್ತಿದ್ದರು. ಇವರಲ್ಲಿ ಒಗ್ಗಟ್ಟು ಇದ್ದಿದ್ದರೆ ಅವರಿಗೆ ಇಲ್ಲಿ ರಾಜ್ಯ ಸ್ಥಾಪಿಸಲು ಸಾಧ್ಯವಾಗುತ್ತಿತ್ತೆ? ಭಾರತದಲ್ಲಿ ಸಂಪತ್ತಿಗೆ ಬರವಿಲ್ಲ. ವಿದೇಶಿಯರು ಅದೆಷ್ಟೋ ಸಲ ಕೊಳ್ಳೆಹೊಡೆದರೂ ಕಡಿಮೆಯಾಗಿಲ್ಲ. ಅಗುವುದಿಲ್ಲ. ಆದರೂ ಸಹಿತ ಭಾರತದಲ್ಲಿ ಬಡವರಿದ್ದಾರೆ ಇದಕ್ಕೆ ಕಾರಣ ಆಳುವವರು ಬಂಡವಾಳಶಾಹಿಗಳು.

ಶಿವಾಜಿಯು ಬಹಳ ಬುದ್ಧಿವಂತ ಆದ್ದರಿಂದಲೇ ಅವನು ಮೊಘಲರಿಗೆ ಬಿಸಿ ಮುಟ್ಟಿಸಿದನು. ಔರಂಗಜೇಬನ ಬಂಧನದಿಂದ ತಪ್ಪಿಸಿಕೊಂಡನು. ಶಿವಾಜಿಯನ್ನು 'ಆವರಣ' ಕಾದಂಬರಿಯಲ್ಲಿ ಸರಿಯಾಗಿಯೇ ಚಿತ್ರಿಸಲಾಗಿದೆ.

ದೇವಗಢದ ಗುಲಾಮ ಮತ್ತು ಅವನ ಪತ್ನಿ ಶಾಮಲೆಯು ಅವರಿಬ್ಬರು ಅನುಭವಿಸಿದುದನ್ನು ನೆನೆಸಿದರೆ ರಕ್ತವು ಕುದಿಯುತ್ತದೆ. ಅಂತಹ ತೊಂದರೆಯನ್ನು ಕೊಟ್ಟ ಇಸ್ಲಾಂ ಮತವು ಶ್ರೇಸಷ್ಠವೇ? ಎಂದು ಯೋಚಿಸಬೇಕು.

ಲಕ್ಷ್ಮಿಯ ಮಗ ನಜೀರನು ಸೌದಿಯಿಂದ ನೇರವಾಗಿ ತಾಯಿಯ ಬಳಿ ಬಂದವನು ತಮ್ಮ ದೇವರೇ ಶ್ರೇಷ್ಠ ಉಳಿದೆಲ್ಲ ದೇವರು ಕನಿಷ್ಠವೆಂದು ವಾದಿಸುತ್ತಾನೆ. ಜಗತ್ತಿನಲ್ಲಿ ಇರುವವನು ಒಬ್ಬನೇ ದೇವನೆಂದು ಆ ತಿಳಿಗೇಡಿಗೆ ಹೇಗೆ ತಿಳಿಯಬೇಕು? ಮತ್ತು ಕ್ಷುದ್ರ ದೇವತೆಗಳಿಂದಲೇ ಭಾರತವು ದರಿದ್ರವಾಗಿದೆ ಎನ್ನುತ್ತಾನೆ. ದರಿದ್ರತೆಗೂ ದೇವರುಗಳಿಗೂ ಯಾವ ಸಂಬಂಧ? ದುಡಿಯುವವನು ಯಾವತ್ತೂ ದರಿದ್ರನಾಗಲಾರ. ಇಸ್ಲಾಂ ರಾಜರ ಕಾಲದಲ್ಲಿ ರೈತರು ದುಡಿದ ಫಲವನ್ನೆಲ್ಲಾ ರಾಜರೇ ಲೂಟಿ ಮಾಡಿದ ಮೇಲೆ ದರಿದ್ರನಾಗದೆ ಬೇರೇನು ಆಗಲು ಸಾಧ್ಯ? ಈ ವಿಷಯ ನಮ್ಮ ದೇಶದಲ್ಲಿ ಹುಟ್ಟಿದ ನಜೀರ ಎಂಬ ತಿಳಿಗೇಡಿಗೆ ತಿಳಿಯಬೇಡವೆ?

ಮದುವೆ ವಿಚಾರದಲ್ಲಿ ಸೌದಿಯವರು ಮುಸ್ಲಿಂ ಆದರೂ ಭಾರತೀಯ ಮುಸ್ಲಿಂರೊಂದಿಗೆ ಸಂಪರ್ಕ ಬೆಳೆಸುವುದಿಲ್ಲ. ಅವರ ದೃಷ್ಟಿಯಲ್ಲಿ ಇವರು ಕನಿಷ್ಠರು. ಅಂದಮೇಲೆ ಅವರಲ್ಲಿ ಸಮಾನತೆ ಎಲ್ಲಿದೆ?

ಇನ್ನು ಅಂತರ್ಜಾತಿ, ಅಂತರ್ಮತೀಯ ವಿವಾಹಗಳು ಸೌದಿಗಳ ದೃಷ್ಟಿಯಲ್ಲಿ ಹಾಸ್ಯಾಸ್ಪದವೆನಿಸುತ್ತವೆ.

ಪ್ರಶಸ್ತಿಯಿಂದ ವ್ಯಕ್ತಿಯು ದೊಡ್ಡವನಾಗಲಾರನು ಪ್ರಶಸ್ತಿಯೇ ಇವನನ್ನು ಹುಡುಕಿಕೊಂಡು ಬರಬೇಕಲ್ಲದೆ. ಇವನು ಅದನ್ನ ಹುಡುಕಿಕೊಂಡು ಹೋಗಬಾರದು ಇದು ಶಾಸ್ತ್ರಿಗಳ ಅಭಿಪ್ರಾಯ. ಆದರೆ ಇಂದು ಪ್ರಶಸ್ತಿಯನ್ನು ಹುಡುಕಿಕೊಂಡು ಹೋಗುವವರೆ ಅಧಿಕವಾಗಿದ್ದಾರೆ.

ಪ್ರೊ. ಶಾಸ್ತ್ರಿಗೆ ಹೆಂಗಸರಿಗೆ ಮುಟ್ಟುವುದು, ಆಲಂಗಿಸುವ ಚಟವಿದೆ. ಶಾಸ್ತ್ರಿಯು ಹಸುವನ್ನು ಪೂಜಿಸುವ ಬ್ರಾಹ್ಮಣನಾಗಿ ಹುಟ್ಟಿ ಹಸುವನ್ನು ತಿನ್ನುವ ಮಟ್ಟಕ್ಕೂ ಬೆಳೆಯುತ್ತಾನೆ. ಈ ಹುಚ್ಚಾಟ ಸರಿಯಾದುದಲ್ಲ. ಶಾಸ್ತ್ರಿಯು ತನ್ನಂತೆ ಮಗಳಿಗೆ ಅಂತರ್ಮತೀಯ ವಿವಾಹ ಮಾಡಿ ನಜೀರನ ಜತೆಗೆ ಸೌದಿಗೆ ಕಳುಹಿಸುತ್ತಾನೆ.

ಉಪನ್ಯಾಸ ನೀಡಲು ಕಾಶಿ, ಅಮೇರಿಕ ಮತ್ತು ಕರ್ನಾಟಕದಿಂದ ಶಾಸ್ತ್ರಗಳಿಗೆ ಕರೆ ಬಂದಿದೆ. ಅದೇ ಸಮಯಕ್ಕೆ ಲಕ್ಷ್ಮಿಯ ಮೂಲಕ ತಾಯಿಯ ಮರಣದ ವಾರ್ತೆಯೂ ಬರುತ್ತದೆ. ತಕ್ಷಣ ಅಲ್ಲಿ ಶ್ರಾದ್ಧದ ವಿಚಾರವೂ ಬರುತ್ತದೆ. ತಂದೆಯೂ ಒಪ್ಪುತ್ತಾರೆ ಆದರೆ ಅದಕ್ಕೆ ಪಶ್ಚಾತ್ತಾಪ ಮಾಡಿಕೊಳ್ಳಬೇಕು. ಅದನ್ನು ಪತ್ರಿಕೆಗಳ ಮೂಲಕವೂ ಪ್ರಕಟಿಸಬೇಕು ಎಂಬ ಶರತ್ತನ್ನು ವಿಧಿಸಿ ಪಶ್ಚಾತ್ತಾಪ ವಿಧಿವಿಧಾನಗಳು ವಿವರಿಸುತ್ತಾರೆ. ಅದಕ್ಕೆ ಪ್ರತಿಕ್ರಿಯೆ ನೀಡದ ಶಾಸ್ತ್ರಿ ಕಾರು ಹತ್ತಿ ಗಲ್ಲಿಗೆ ಬಂದು ಹೊಟ್ಟೆ ಬಿರಿಯುವಂತೆ ತಿಂದು ಬೇಸರ ಕಳೆದುಕೊಳ್ಳಲು ಕುಡಿಯಲು ಮುಂದಾಗುತ್ತಾನೆ.

ಪಶ್ಚಾತ್ತಾಪ ಮಾಡಿಕೊಳ್ಳಲು ಶಾಸ್ತ್ರಿಗಳು ಗೋಹತ್ಯೆ ನೀಷಧದ ಬಗ್ಗೆ ಲೇಖನ ಬರೆಯಲು ಪ್ರಾರಂಭಿಸುತ್ತಾರೆ. ಇದರಿಂದ ಪಶ್ಚಾತ್ತಾಪವೂ ಆಗುತ್ತದೆ. ಸಮಾಜದಲ್ಲಿ ತನ್ನ ಪ್ರಭಾವವು ಉಳಿಯುತ್ತದೆ ಎಂದು ಶಾಸ್ತ್ರಿ ತನ್ನ ಸ್ವಾರ್ಥಬುದ್ಧಿ ತೋರಿಸುತ್ತಾನೆ.

ಇಂತಹ ಪಲಾಯವಾದಿಗಳೇ ಸಮಾಜದಲ್ಲಿ ತುಂಬಿದ್ದಾರೆ. ಇಂತಹ ಚಿಲ್ಲರೆ ಜನರಿಗೆ ನಾವು ಹೆದರಬೇಕಿಲ್ಲ ಎಂದೆನಿಸುತ್ತದೆ. ಇದೇ ಶಾಸ್ತ್ರಿ ಕಾಳೇನಹಳ್ಳಿಯವರ ಬಗ್ಗೆ ಕೋಪದಿಂದ ಅವರನ್ನು ಸೂಳೆಮಕ್ಕಳೆಂದು ಕೆಟ್ಟ ಪದಗಳನ್ನು ಬಳಸುತ್ತಾರೆ. ಇದು ಶಾಸ್ತ್ರಿಯಂಥವರಿಗೆ ಶೋಭೆ ತರುವುದಿಲ್ಲ. ಒಳ ಸ್ವಾರ್ಥಿಗಳು ಇರುವುದರಿಂದಲೇ ನಮ್ಮ ಭಾಷೆಯಾಗಲಿ, ಮತವಾಗಲಿ, ದೇಶವಾಗಲಿ ಬೆಳೆಯಲು ಸಾಧ್ಯವಾಗುವುದಿಲ್ಲ.

ಕಾಶಿಗೆ ಬಂದಾಗ ಮೊಘಲರು ಮಾಡಿದ ಅತ್ಯಾಚಾರವನ್ನು ಬ್ರಾಹ್ಮಣರ ಕಗ್ಗೊಲೆಯನ್ನು ತಿಳಿದುಕೊಂಡು ಸಂಕಟಪಡುತ್ತಾರೆ. ಸುಬ್ಬಣ್ಣ ಮತ್ತು ಆತನ ಪತ್ನಿ ಮತ್ತು ಲಕ್ಷ್ಮಿ

ಹಿಂದೂಗಳನ್ನು ಹಿಂದೂ ಸಂಸ್ಕೃತಿಯನ್ನು ನಾಶಮಾಡಲು ಯಾರು ಎಷ್ಟೇ ಪ್ರಯತ್ನ ಮಾಡಿದರೂ ಅದು ನಾಶವಾಗುವುದಿಲ್ಲ. ಇವರು ಅಜ್ಜಿಯ ಆಸ್ಥಿಯನ್ನು ವಿಸರ್ಜಿಸಲು ಕಾಶಿಗೆ ಹೋಗಿರುತ್ತಾರೆ. ಕಾಶಿಯಲ್ಲಿ ಒಂದು ದಿನ ಇದ್ದಕ್ಕಿದ್ದಂತೆ ಶಾಸ್ತ್ರಿ ಕಣ್ಣಿಗೆ ಬೀಳುತ್ತಾರೆ ಆಗ ಅವರು ಶ್ರಾದ್ಧ ಮಾಡಲೆಂದೇ ಬಂದರೂ ಕೂಡಾ ಬೇರೆ ಕೆಲಸಕ್ಕೆ ಬಂದಿದ್ದನೆಂದು ಸುಳ್ಳು ಹೇಳಿ ಹೊರಟು ಹೋಗುತ್ತಾರೆ. ಇಂತಹ ಶಾಸ್ತ್ರಗಳಂಥವರು ಎಷ್ಟೇ ಪ್ರಯತ್ನಪಟ್ಟರೂ ಹಿಂದೂ ಸಂಸ್ಕೃತಿಯು ನಾಶವಾಗುವುದಿಲ್ಲ.

ದೇವಗಢದ ಯುವರಾಜನು ಕಾಶಿಯನ್ನು ನೋಡಿ ಸಾಧುವಿನ ಹೇಳಿಕೆ ಪ್ರಕಾರ ಹಿಂದುಗಳಲ್ಲಿ ಆತ್ಮಬಲವಿದೆ. ಅವರು ಸುಮ್ಮಸುಮ್ಮನೆ ಕೆಣುಕುವುದಿಲ್ಲ. ಕೆಣಕಿದವರನ್ನು ಬಿಡುವುದಿಲ್ಲ. ನಮ್ಮ ಋಷಿಮುನಿಗಳೂ ಕೆಟ್ಟ ವಿಚಾರವನ್ನು ಭೋದಿಸುವುದಿಲ್ಲ. ಆದರೆ ಕೆಟ್ಟದ್ದನ್ನು ಭೋದಿಸುವವನು ಪ್ರವಾದಿ ಹೇಗಾಗುತ್ತಾನೆ? ಇಂತಹ ಕೆಟ್ಟ ಮತವನ್ನು ಕೆಟ್ಟದೆಂದು ಒಪ್ಪಿಕೊಳ್ಳದೆ ಅದನ್ನು ಶ್ರೇಷ್ಠದರ್ಜೆಗೆ ಏರಿಸುವ ಶಾಸ್ತ್ರಿಗಳಿಗೆ ನಿಜವಾಗಿಯೂ ಹುಚ್ಚು ಹಿಡಿದಿದೆ ಎನ್ನಬೇಕು.

ಶಾಸ್ತ್ರಿಯು ಅನೇಕ ಸಭೆ ಸಮಾರಂಭಗಳಲ್ಲಿ ಅವರು ಅಲ್ಪಸಂಖ್ಯಾತರು ಆದ್ದರಿಂದ ಅವರಿಗೆ ಅನುಕೂಲ ಒದಗಿಸಬೇಕು ಎನ್ನುತ್ತಾನೆ. ಅವರಿಗೆ ನಮ್ಮ ದೇಶದಲ್ಲಿ ಸಿಗುವಷ್ಟು ಅನುಕೂಲ ಸೌಲಭ್ಯ ಗೌರವ ಮತ್ತೆಲ್ಲಿಯೂ ಸಿಗುವುದಿಲ್ಲ. ಅದನ್ನು ತಿಳಿದೆ ಶಾಸ್ತ್ರಿಯು ಇಲ್ಲದ ಆರೋಪ ಮಾಡುವುದನ್ನೆ ಕೇಳಿ ಲಕ್ಷ್ಮಿಗೆ ತಡೆಯಲಾಗಲಿಲ್ಲ. ಸಭಾ ಶಿಷ್ಟಾಚಾರಕ್ಕಾಗಿ ಅವಳು ಶಾಸ್ತ್ರಿಯನ್ನು ಖಂಡಿಸಲಿಲ್ಲ.

ದೇವಗಢದ ಯುವರಾಜನು ಕಾಶಿಯಿಂದ ಮರಳಿದ ಮೇಲೆ ಮನಸ್ಸೂ ಮತ್ತಷ್ಟು ಗಟ್ಟಿಯಾಗುತ್ತದೆ. ಈಗ ಶಾಮಲೆಯನ್ನು ಹೊಂದಿ ಮೊಘಲರ ಮೇಲೆ ಸೇಡು ತೀರಿಸಿಕೊಳ್ಳುತ್ತಾನೆ. ಅವನ ಸೇಡು ಔರಂಗಜೇಬನನ್ನು ಕೊಲ್ಲುವ ಮಟ್ಟಕ್ಕೂ ಮುಟ್ಟುತ್ತದೆ. ಆಗ ಶಿವಾಜಿಯು ಬಂಧನದಿಂದ ಪಾರಾದ ಸುದ್ದಿ ತಿಳಿದು ಮತ್ತಷ್ಟೂ ಖುಷಿಪಡುತ್ತಾನೆ. ಯುವರಾಜನು ಹೇಗಾದರೂ ಮಾಡಿ ಔರಂಗಜೇಬನನ್ನು ಕೊಲ್ಲಬೇಕು ಎಂದು ನಿರ್ಧರಿಸುತ್ತಾನೆ. ಆದರೆ ಹಾಗೆ ಆಗುವುದಿಲ್ಲ.[9]

ಶಾಸ್ತ್ರಿಗಳು ದೇಹಲಿಯಲ್ಲಿ ನಡೆದ ಭಾವೈಕ್ಯತಾ ಸಭೆಯಲ್ಲಿ ಮುಸ್ಲಿಮರು ಹಿಂದುಗಳ ಮೇಲೆ ಯಾವ ಅತ್ಯಾಚಾರವನ್ನು ಮಾಡಿಲ್ಲ ಎಂದು ಸುಳ್ಳು ಬೊಗಳುತ್ತಾನೆ. ಆಗ ಲಕ್ಷ್ಮಿಯು ಎದ್ದು ಸಭಿಕರನ್ನು ಉದ್ದೇಶಿಸಿ ಇದು ಸಂಪೂರ್ಣ ಸುಳ್ಳು. ಅದಕ್ಕೆ ನನ್ನಲ್ಲಿ ಆಧಾರಗಳಿವೆ ಎಂದು ಎಳೆ ಎಳೆಯಾಗಿ ಬಿಡಿಸಿದಳು. ಈಗ ನಾವು ಮುಚ್ಚಿಡಬಹುದು ಮುಂದೆ ಅವರಿಗೆ ಗೊತ್ತಾದಾಗ ಏನೆನ್ನುತ್ತಾರೆ ನೀವೇ ಹೇಳಿ ಎಂದಾಗ ಸಭೆ ಮೌನವಾಯಿತು. ಶಾಸ್ತ್ರಿಗೆ ದಿಗಿಲಾಯಿತು. ಸಭೆಯ ಅಭಿಪ್ರಾಯ ಕೇಳುತ್ತಾನೆ. ಅವರೆಲ್ಲರೂ ಶಾಸ್ತ್ರಿಯ ಗುಲಾಮರು ಮತ್ತು ಸರ್ಕಾರದ ಗುಲಾಮರು.

ಆದ್ದರಿಂದ ಅವರೆಲ್ಲಾ ಲಕ್ಷ್ಮಿಯನ್ನೇ ಆಕ್ಷೇಪಿಸುತ್ತಾರೆ. ಅವಳು ಜಗ್ಗದೆ ತನ್ನ ಮಾತನ್ನು ಮುಂದುವರಿಸುತ್ತಾಳೆ. ಶಾಸ್ತ್ರಿಗಳು ಅವಳ ಮಗನಿಗೆ ತಮ್ಮ ಮಗಳು ಕೊಟ್ಟಿರುವುದರಿಂದ

ಅವಳನ್ನು ಎದುರು ಹಾಕಿಕೊಳ್ಳುವಂತಿಲ್ಲ. ಎರಡನೇ ಸಭೆಗೆ ಲಕ್ಷ್ಮಿಗೆ ಆಹ್ವಾನ ಬರುವುದಿಲ್ಲ. ಅವರೇ ಔರಂಗಜೇಬನು ಮತಾಂಧನಲ್ಲ ಶ್ರೇಷ್ಠನೆಂದು ತೀರ್ಮಾನಿಸಿದ್ದರು. ಅದಕ್ಕೆ ರಾಣಿಯ ಶೀಲಹರಣದ ಕಥೆಯನ್ನು ಸೃಷ್ಟಿಮಾಡಿದ್ದರು. ಇದು ತೀರ ಅಸಹ್ಯಕರ. ಕುಲಕ್ಕೆ ಕುಲ ವೈರಿಯನ್ನುವಂತೆ ಹಿಂದುಗಳಿಗೆ ಹಿಂದುಗಳೇ ವೈರಿಗಳಾಗುತ್ತಾರೆ.

ದೇಹಲಿಯಲ್ಲಿ ನಡೆದ (ವಿಚಾರಗಳ) ಸಭೆಯ ವಿಚಾರಗಳೆಲ್ಲವೂ ಎಲ್ಲಾ ಪತ್ರಿಕೆಗಳಲ್ಲೂ ಪ್ರಕಟವಾದವು. ಆದರೆ ಅದರಲ್ಲಿ ಲಕ್ಷ್ಮಿಯ ವಿಚಾರವಾಗಲಿ ಅವಳ ಹೆಸರಾಗಲಿ ಇರಲಿಲ್ಲ. ಇದಕ್ಕೆ ಶಾಸ್ತ್ರೀಯ ಕುಮ್ಮಕ್ಕು ಇರಬಹುದೆಂದು ಊಹಿಸಬಹುದು.

**ಕೊನೆ ಟಿಪ್ಪಣಿಗಳು**

೧. ಎಸ್. ಎಲ್. ಭೈರಪ್ಪ, ಆವರಣ, ಸಾಹಿತ್ಯ ಭಂಡಾರ, ೨೦೦೭, ಪುಟ ೧.
೨. ಅದೇ ಪುಟ ೧.
೩. ಅದೇ ಪುಟ ೨೪.
೪ ಅದೇ ಪುಟ ೨೭.
೫. ಎನ್. ಎಸ್. ಶಂಕರ, ಆವರಣ–ಅನಾವರಣ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು. ಪುಟ ೬.

# ಅಧ್ಯಾಯ ೨

# ಆವರಣದ ಸ್ಥಿತಿಗತಿ

ಈ ಕಾದಂಬರಿಯ ಉದ್ದಕ್ಕೂ ಭೈರಪ್ಪನವರು ಮುಸ್ಲಿಂ ಅರಸರ, ಔರಂಗಜೇಬ ಮತ್ತು ಟಿಪ್ಪು ಅವರ ಆಳ್ವಿಕೆಯಲ್ಲಿ ನಡೆದ ಕ್ರೂರ ಕೃತ್ಯಗಳನ್ನು ಎತ್ತಿ ತೋರಿಸುತ್ತಾರೆ. ಹಿಂದುತ್ವವಾದಿಗಳು ಯಾವತ್ತು ಮುಸ್ಲಿಂ ಅರಸ ಒಳ್ಳೆಯ ನಡತೆಗಳನ್ನು ಮರೆತುಬಿಡುವಂತೆ ಕಾದಂಬರಿಕಾರ ಭೈರಪ್ಪನವರೂ ಕೂಡ ಟಿಪ್ಪುವಿನ ಆಯ್ದ ವ್ಯಕ್ತಿತ್ವವನ್ನು ಚಿತ್ರಿಸುತ್ತಾರೆ.

ಆದರೆ ಆವರಣದಲ್ಲಿ ರಜಿಯಾ ಅಲಿಯಾಸ್ ಲಕ್ಷ್ಮಿಯ ಪಾತ್ರ ಸೂಕ್ಷ್ಮವಾಗಿ ನೋಡಿದಾಗ ದ್ವಿಪಾತ್ರದಲ್ಲಿ ಕಾಣಿಸಿಕೊಂಡ ರೀತಿ ಅಥವಾ ಅವಳ ನಟನೆ ಅದ್ಭುತವಾಗಿದೆ. ರಜಿಯಾ ಅಲಿಯಾಸ್ ಲಕ್ಷ್ಮಿ ಒಕ್ಕಲಿಗ ಹೆಣ್ಣು ಮಗಳು. ವಿದ್ಯಾವಂತೆ, ತಂದೆಯನ್ನು ಧಿಕ್ಕರಿಸಿ ಮುಸ್ಲಿಂ ಯುವಕನನ್ನು ಮದುವೆಯಾದವಳು. ಕೊನೆಗೆ ಗಂಡನನ್ನು ಧಿಕ್ಕರಿಸಿ ತನಗೆ ಸರಿ ಅನಿಸಿದ ದಾರಿಯನ್ನು ಹಿಡಿದು ಕೌಟುಂಬಿಕ ರೀತಿ ರೀವಾಜುಗಳನ್ನು ಧಿಕ್ಕರಿಸಿ ನಡೆಯುವ ಧೈರ್ಯ ತೋರುವವಳು.

ಈ ಅರ್ಥದಲ್ಲಿ ಈಕೆ ದಿಟ್ಟ ಸ್ತ್ರೀವಾದಿ. ಬಲಪಂಥೀಯ ಚರಿತ್ರೆಯನ್ನು ಎತ್ತಿಹಿಡಿಯಲು ಮತ್ತು ಮುಸ್ಲಿಂ ದ್ವೇಷವನ್ನು ವ್ಯಕ್ತಪಡಿಸಲು ಲೇಖಕರು ಈ ಹಿನ್ನೆಲೆಯ ಪಾತ್ರವನ್ನು ಬಳಸುವುದು ಗಮನಾರ್ಹ.

ಸಂಘ ಪರಿವಾರದ ರಾಜಕಾರಣ ಸ್ತ್ರೀವಾದಿ ನೆಲೆಗಳನ್ನು ಹೇಗೆ ತನ್ನ ಅಜೆಂಡಾಗಳಿಗೆ ಬಳಸಿಕೊಳ್ಳುತ್ತಿದೆ ಅನ್ನುವುದರ ಬಗ್ಗೆ ಇತ್ತೀಚಿನ ದಿನಗಳಲ್ಲಿ ಬಹಳಷ್ಟು ಚರ್ಚೆ ನಡೆದಿದೆ.[೧] ಗುಜರಾತ ನರಮೇಧದಲ್ಲಿ ಹೆಂಗಸರು ಸಕ್ರೀಯವಾಗಿ ಭಾಗವಹಿಸಿದ್ದರ ಬಗ್ಗೆ, ಇದು ನಮ್ಮ ಹಳೆಯ ಸ್ತ್ರೀವಾದಿ ಕಲ್ಪನೆಗಳನ್ನು ಹೇಗೆ ಬುಡಮೇಲು ಮಾಡುತ್ತದೆ ಅನ್ನುವ ಬಗ್ಗೆಯೂ ಚರ್ಚೆಗಳಾಗಿವೆ. ಉದಾಹರಣೆಗೆ ಮಹಿಳೆಯರು ಸ್ವಾಭಾವತರು ಶಾಂತಿ ಪ್ರೀಯರು, ಇವರು ಕದನ, ಕಲಹಗಳ ನಡುವೆ ಸಿಕ್ಕಿಹಾಕಿಕೊಂಡು ಬಳಲುವ ವ್ಯಕ್ತಿಗಳು ಮಾತ್ರ ಎಂಬ ಸಾಮಾನ್ಯ ನಂಬಿಕೆ ಇಲ್ಲಿ ಕೆಲಸಕ್ಕೆ ಬರುವುದಿಲ್ಲ. ಒಂದು ಅರ್ಥದಲ್ಲಿ ಈ ಮಹಿಳೆಯರು ಕ್ರಿಯೆಯಲ್ಲಿ ಭಾಗಿಗಳು ಮತ್ತು ಸ್ತ್ರೀವಾದೀ ಪರಂಪರೆ ಮುಂಚಿನಿಂದ

ನಂಬಿಕೊಂಡು ಬಂದ ಕೆಲವು ಸಾರ್ವತ್ರಿಕ ನಂಬಿಕೆಗಳನ್ನು ಅಲ್ಲಾಡಿಸುವಂತವು. ಸಾಧ್ವಿರಿತಾಂಬರಾ ಅಥವಾ ಉಮಾಭಾರತಿ ಒಂದು ಮಟ್ಟದಲ್ಲಿ ಭಾರತೀಯತೆಯ ಬಗ್ಗೆ ಭಯಂಕರ ಭಾಷಣಗಳನ್ನು ಬಿಗಿಯುತ್ತಿದ್ದರೂ ತಾವೇ ಮಾಡೆಲ್ ಹಿಂದೂ ಸ್ತ್ರೀ ಎಂಬ ಸ್ಟೀರಿಯೋಟೈಪನ್ನು ಮೀರಿದವರು ಎಂಬುದನ್ನು ಒಪ್ಪಿಕೊಳ್ಳಲೇಬೇಕು.[೧]

ಸಂಘಪರಿವಾರದ ರಾಜಕೀಯದ ಒಳಗಡೆಯೇ ಸೀಮಿತವಾದ ಈ ಮಹಿಳೆಯರು ಪುರುಷ ಪ್ರಧಾನತೆಯ ಕಟ್ಟುಪಾಡುಗಳನ್ನು ಒಂದು ಹಂತದಿಂದಾಚೆಗೂ ಮೀರಲಾರರು ಎಂಬುದಕ್ಕೂ ಈ ಪ್ರಶ್ನೆಗಳನ್ನೆತ್ತಿದ ಸ್ತ್ರೀವಾದಿಗಳು ಪುರಾವೆಗಳನ್ನೊಗಿಸಿದ್ದಾರೆ. ಉದಾಹರಣೆಗೆ ಗುಜರಾತ ನರಮೇಧದಲ್ಲಿ ಪಾಲ್ದಾರರಾದ ಮಹಿಳೆಯರನೇಕರು ಹಿಂದೂ ಹುಡುಗರು ಮುಸ್ಲಿಂ ಮಹಿಳೆಯರ ಮೇಲೆ ಅತ್ಯಾಚಾರ ಮಾಡಿದ ಘಟನೆಗಳನ್ನು 'ಬಾಯ್ಸ್ ವಿಲ್ ಬಿ ಬಾಯ್ಸ್' ಎಂಬ ತರ್ಕದಲ್ಲಿ ಒಪ್ಪಿಕೊಂಡಿರುವುದನ್ನು ಸ್ತ್ರೀವಾದಿ ಲೇಖಕರು, ಸಂಘಟನೆಗಳು ದಾಖಲಿಸಿದ್ದಾರೆ. ಅಂದರೆ ಈ ರೀತಿಯ 'ಸ್ತ್ರೀ ಸಬಲೀಕರಣ' ಪುರುಷ ಪ್ರಧಾನತೆಯ ಅಡಿಪಾಯವನ್ನು ಪ್ರಶ್ನಿಸುವುದಿಲ್ಲ ಮತ್ತು ಸಂಘಪರಿವಾರ ಹಾಕಿದ ಬೇಲಿಯ ಆಚೆಗೆ ಹೋಗುವುದಿಲ್ಲ.

ಲಕ್ಷ್ಮಿಯ ಪಾತ್ರದ ಸ್ತ್ರೀವಾದ, ಎಲ್ಲರನ್ನೂ ಪ್ರಶ್ನಿಸುವ ಛಾತಿ ಕೂಡ ಈ ರೀತಿಯಲ್ಲಿ ಕುತುಹಲಕಾರಿಯಾಗಿದೆ. ಈಕೆ ಯಾವ ಹಂತದಲ್ಲಿ ಧಿಕ್ಕರಿಸುತ್ತಾಳೆ, ಯಾವುದನ್ನು ಪ್ರಶ್ನಿಸದೆ ಒಪ್ಪಿಕೊಳ್ಳುತ್ತಾಳೆ ಎನ್ನುವುದು. ಗಮನಿಸಿ ನೋಡಬೇಕಾದ ವಿಚಾರ. ಗಂಡನನ್ನು ಗಂಡನ ಮತನನ್ನು ಆಮೂಲಾಗ್ರವಾಗಿ ವಿಮರ್ಶಿಸುವ ಈಕೆ ತಾನೇ ಬಂದ ಹಂತದಲ್ಲಿ ಧಿಕ್ಕರಿಸಿದ ತಂದೆಯನ್ನು ಅವರ ನಂಬಿಕೆಗಳನ್ನು ಪ್ರಶ್ನಿಸದೆ ಸಂಪೂರ್ಣ ಒಪ್ಪಿಕೊಳ್ಳುವುದು ವಿಚಿತ್ರ ಎನಿಸುತ್ತದೆ. ಜಾತ್ಯಾತೀತವಾಗಿ ಬದುಕಲಾರಂಭಿಸಿದ್ದ ಲಕ್ಷ್ಮಿ ಪರಂಪರೆಗೆ ಜೋತುಬೀಳುವ ಮತಾಂಧನೆಗೆ ಮರಳುವ ಕಾದಂಬರಿಕಾರ ಸೈದ್ಧಾಂತಿಕತೆಯ ಕಾರಣಕ್ಕಾಗಿ ಹಿಮ್ಮುಖವಾಗಿ ಚಲಿಸುತ್ತಾಳೆ.[೨]

ಇನ್ನೊಂದು ಕಡೆ ಮಾಂಸಾಹಾರ, ಜಾತಿ ಪದ್ಧತಿ ಇತ್ಯಾದಿ ವಿಚಾರಗಳು ಬಂದಾಗ ಈಕೆ ತೋರುವ ಅಪ್ಪಟ ಬ್ರಾಹ್ಮಣರ ಧೋರಣೆ ಲೇಖಕರು ತಮ್ಮ ಮುಖ್ಯ ಪಾತ್ರಕ್ಕೆ ಆರಿಸಿರುವ ಜಾತಿ ಹಿನ್ನೆಲೆ ಒಂದು ಜಾಣತನದ ತಂತ್ರ ಮಾತ್ರ ಎಂಬುದನ್ನು ಮನಗಟ್ಟು ಮಾಡಿಕೊಡುತ್ತದೆ. ಬಾಣಂತಿ ಕೋಣೆಯಲ್ಲಿ ಮಲಗಿದ್ದ ನನಗೆ ಎರಡು ಆಡುಗಳನ್ನು ಬಲಿಕೊಡುವ ಬದಲು ಎರಡು ಚಿಪ್ಪು ಅಥವಾ ಎರಡು ಗೊನೆ ಬಾಳೆಹಣ್ಣನ್ನು ನೈವೇದ್ಯ ಮಾಡಿ ಬೆಲ್ಲ ಕಾಯಿತುರಿ ಹಾಕಿ ರಸಾಯನ ಮಾಡಿ ಎಲ್ಲರಿಗೂ ಹಂಚಬಹುದಿತ್ತಲ್ಲಾ ಎಂಬ ಆಲೋಚನೆ ಬಂತು. ನಾನೂ ಮಾಂಸ ತಿನ್ನುವ ಜಾತಿಯಲ್ಲಿ ಹುಟ್ಟಿದವಳೇ. ಗಾಂಧಿಯ ಪ್ರಭಾವಕ್ಕೆ ಸಿಕ್ಕಿದ ಮೇಲೆ ಅಪ್ಪ ಶುದ್ಧ ಸಸ್ಯಹಾರಿಯಾಗಿ ನಮ್ಮ ಮನೆಯಲ್ಲಿ ಮಾಂಸವು ವ್ಯರ್ಜವಾಯಿತಂತೆ ವಿಶೇಷ ದಿನಗಳಲ್ಲಿ ದಿನಾ ಉಳಿದಂತೆ ನಮ್ಮ ಜಾತಿಯವರೂ ಸಸ್ಯಾಹಾರಿಗಳೇ ಆದರೂ ದಯಾಮಯ ದೇವರಿಗೆ ಪ್ರಾಣಿವಧೆಯ ನೈವೇದ್ಯ ಮಾಡುವ ಕಲ್ಪನೆ ಆಧ್ಯಾತ್ಮದ ಮಟ್ಟದಲ್ಲಿ ಕಿರಿಕಿರಿ ಅನಿಸಿತು. ನಾನು ಒಕ್ಕಲಿಗರು ಅನ್ನೋದು ನಿಜ.[೩]

ಮಾಂಸ ತಂತೀನಿ ಅನ್ನೋದು ನಿಜ. ಆದರೆ ಪ್ರತಿದಿನ ಅಲ್ಲ. ಅಡಿಗೆ ಮನೆಯಲ್ಲಿ ಮಾಂಸ ಬೇಯಿಸೊಲ್ಲ. ಜಗಲಿಯ ಅಥವಾ ಹಿತ್ತಲಿನ ಸ್ನಾನದ ಮನೆಯ ಒಲೆಯಲ್ಲಿ ಅದಕ್ಕೆಂದೇ ಇಟ್ಟಿರುವ ಮಡಿಕೆಯಲ್ಲಿ ಮಾಂಸದ ಸಾರು ಮಾಡ್ತಾರೆ ಅದಕ್ಕೆಂದೆ ಒಂದು ಸೊಟ್ಟಗ ಇಟ್ಟಿರುತ್ತಾರೆ. ದಿನಾ ತಿನ್ನುವ ಗಂಗಾಳದಲ್ಲಿ ಮಾಂಸವನ್ನು ಇಕ್ಕಲ್ಲ...ಅಂದರೆ ಮಾಂಸಾಹಾರ ನಿಷಿದ್ಧವೇ ಅದು ಪ್ರಾಣಹಿಂಸೆ ಅನ್ನುವುದು ಮೂಲತತ್ವ. ಈ ರೀತಿ ಮಾಂಸಾಹಾರದ ಬಗ್ಗೆ ಅಪೋಲಜೆಟಿಕ್ ಆದ, ಕೀಳರಿಮೆಯ ಮಾತುಗಳನ್ನು ಬಹಳಷ್ಟು ಈಕೆ ಆಡುತ್ತಾಳೆ.

ತನ್ನ ಮಗ ಅಪ್ಪನ ಹಳ್ಳಿಯ ಮನೆಗೆ ಬಂದ ಸಂದರ್ಭದಲ್ಲಿ ಮನೆಯನ್ನು ನೋಡಿಕೊಳ್ಳುವ ಕೆಂಚಪ್ಪ ಮತ್ತು ಅವನ ಪತ್ನಿ 'ತುರುಕ' ಹುಡುಗ ಅಡಿಗೆ ಪಾತ್ರೆ, ಬಚ್ಚಲ ಹಂಡೆ ಎಲ್ಲ ಮುಟ್ಟಿ ಮೈಲಿಗೆ  ಮಾಡಿದ್ದರ ಬಗ್ಗೆ ಅಸಮಾಧಾನ ವ್ಯಕ್ತಪಡಿಸುತ್ತಾರೆ. ಅವಳಿಗೆ ಇದ್ದಕ್ಕಿದ್ದಂತೆ ಮೈ ಬೆವರಿತು. ಈ ಅಂಶ ಅವಳ ಮನಸ್ಸಿಗೆ ಬಂದಿರಲಿಲ್ಲ. ಕೆಂಚಪ್ಪನ ಕೈಲಿ ವಾದ ಮಾಡಲು ಇದು ಸಮಯವಲ್ಲ. ಅಲ್ಲದೇ ಎಷ್ಟೇ ವಾದ ಮಾಡಿದರೂ ಅವನಾಗಲಿ ಲಕ್ಷ್ಮಮ್ಮನಾಗಲಿ ಬದಲಾಗುವುದಿಲ್ಲ. ತಾವು ಒಪ್ಪಿದರೂ ಗ್ರಾಮದ ಇತರ ಜಾತಿಸ್ಥರ ಅಂಜಿಕೆ ಇರುತ್ತದೆ. ತೀರ ಹಟ ಹಿಡಿದರೆ ನಿಮ್ಮ ಮನೇಲಿ ಕೂಲಿಗಿದಿವಿ ಅಂತ ಜಾತಿ ಕೆಡಸೀರಾ ಎನ್ನಬಹುದು. ಒಮ್ಮೆ ಮಾತು ಆ ಮಟ್ಟಕ್ಕೆ ಹೋದರೆ ವಿಶ್ವಾಸ ಒಡೆದುಹೋಗುತ್ತದೆ ಎಂಬ ಎಚ್ಚರ ಹುಟ್ಟಿತು. ಕೊನೆಗೆ ದನದ ಕೊಟ್ಟಿಗೆಯಲ್ಲಿ ಪ್ಲಾಸ್ಟಿಕ್ ಮಗ್ಗು, ಬಕೀಟು ಇಡಲು ರಜಿಯ ಅಲಿಯಾಸ ಲಕ್ಷ್ಮಿ ಹೇಳುತ್ತಾಳೆ ಪ್ಲಾಸ್ಟಿಕ್ಕಿಗೆ ಮೈಲಿಗೆ ಇಲ್ಲ.

ಕಾಶಿಯಲ್ಲಿ ಸೈಕಲ್ ರಿಕ್ಷಾ ತುಳಿಯುವವನ ಬಗ್ಗೆ ಈಕೆ ಇನ್ನೊಂದು ಸಂದರ್ಭದಲ್ಲಿ ಮಮ್ಮಲ ಮರಗುತ್ತಾಳೆ. "ಬ್ರಾಹ್ಮಣನಾಗಿಯೂ ರಿಕ್ಷಾ ತುಳಿಯುತ್ತಿದ್ದೀಯಲ್ಲಾ" ಎಂದು ಕೇಳುತ್ತಾಳೆ. ಆತ ಮುಸಲ್ಮಾನರು, ಬ್ರಿಟಿಷರು, ಸ್ವತಂತ್ರ್ಯ ಭಾರತದ ರಾಜಕಾರಣಿಗಳು ಹೀಗೆ ಎಲ್ಲರೂ ಬ್ರಾಹ್ಮಣರ ವಿರುದ್ಧ ಕತ್ತಿ ಮಸೆದಿದ್ದಾರೆ ಎಂದು ಹೇಳುತ್ತಾನೆ.

ಈ ವ್ಯಕ್ತಿ ಕಾಶಿಯ ಚರಿತ್ರೆಯನ್ನು ರಜಿಯಾ ಅಲಿಯಾಸ್ ಲಕ್ಷ್ಮಗೆ ಮನದಟ್ಟು ಮಾಡಿಕೊಡುವ ಗುರು. ಬ್ರಾಹ್ಮಣರು ಮತ್ತು ಬನಿಯಾಗಳು ಹೇಗೆ ಹಿಂದೂ ಸಂಸ್ಕೃತಿಯನ್ನು ಸಂರಕ್ಷಿಸಿದರು ಎಂದು ಬಿಗಿಯುತ್ತಾನೆ. ವೈಧಿಕ ಪರಂಪರೆಯ ವಿಮರ್ಶೆಯಂತೆ ತೋರುವ ಮಾತುಗಳೂ ಇಲ್ಲಿ ಅಸಲು ವಿಮರ್ಶೆಗಳೇ ಅಲ್ಲ. ಈ ವರಸೆ ನೋಡಿ : "ಇತಿಹಾಸದುದ್ದಕ್ಕೂ ತಮ್ಮ ಶ್ರದ್ಧೆಗಾಗಿ ಸಾವಿರ ಸಾವಿರ ಸಂಖ್ಯೆಯಲ್ಲಿ ಬಲಿದಾನ ಮಾಡಿದ ಬ್ರಾಹ್ಮಣ ಪರಂಪರೆ ಇದ್ದು ಆಗಿನ ಬನಾರಸಿ ಬ್ರಾಹ್ಮಣರು ಯಾಕೆ ಹೇಡಿಗಳಾದರು? ಅವರನ್ನು ನಿರ್ವೀರ್ಯರನ್ನಾಗಿಸುವ ಮುಸ್ಲಿಂ ದೊರೆಗಳ ಉದ್ದೇಶ ಫಲ ಕೊಡತೊಡಗಿತ್ತು."

ಆಡಂಬರದ ಪ್ರತೀಕವೆಂಬಂತೆ ಉದ್ದಕ್ಕೂ ಚಿತ್ರಿಸಲಾದ, ಕ್ರಿಶ್ಚಿಯನ್ನಳನ್ನು ಮದುವೆಯಾಗಿರುವ, ಪ್ರಗತಿಪರ ಮಾತುಗಳನ್ನಾಡುವ ಶಾಸ್ತ್ರೀಯ ಅತಂತ್ರತೆಯ ಬಗ್ಗೆ

ರಜಿಯ ಅಲಿಯಾಸ ಲಕ್ಷ್ಮಿಗೆ ಕನಿಕರ. "ಇಲ್ಲಿಯ ಸಂಸ್ಕೃತಿಯ ಬೇರನ್ನು ಕುಟುಂಬದಲ್ಲಿ ಬಯಸಿದಾಗ ಖಾಲಿ ಎನ್ನಿಸಬಹುದು. ವರ್ಣ ಸಂಕರದ ದ್ಯೋತ್ಯಕವಾದ ಶಾಸ್ತ್ರೀಯ ಮಗಳ ಎಡಬಿಡಂಗಿ ಸ್ಥಿತಿ ಆಕೆಯ ಹಿಂದೂ ಧರ್ಮದ ಬಗೆಗಿನ ಆಕರ್ಷಣೆ, ಕೊನೆಗೆ ಆಕ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡು ಲಕ್ಷ್ಮಿಯ ಮಗನನ್ನು ಮದುವೆಯಾಗುವವರಿಗೆ ಎಲ್ಲವೂ ಅಂತರ್ಜಾತೀಯ ಅಂತರ್ಧರ್ಮತ ವಿವಾಹದಿಂದಾಗುವ ಅಸ್ಥಿರತೆ, ಅನಾಹುತದ ಬಗ್ಗೆ ಎಚ್ಚರಿಕೆ ನೀಡಿದಂತೆಯೇ ಇವೆ.

ಕೊನೆಗೊಮ್ಮೆ "ಆಧುನಿಕ ವಿದ್ಯೆಗೆ ಒಳಗಾದ ಪ್ರತಿಯೊಬ್ಬರೂ ಸ್ತ್ರೀವಾದಿಯಾಗಿರ್ತಾರೆ, ಹೆಂಗಸಂತೂ ಪ್ರಖರವಾದ ಸ್ತ್ರೀವಾದಿಯಾಗಿಯೇ ಇರ್ತಾಳೆ. ಸ್ತ್ರೀವಾದದ ಮೊನಚಿಲ್ಲದ ಆಧುನಿಕ ವಿದ್ಯಾವಂತ ಮಹಿಳೆ ಒಬ್ಬಳೂ ಇರಲು ಸಾಧ್ಯವಿಲ್ಲ" ಎಂದು ರಜಿಯಾ ಅಲಿಯಾಸ ಲಕ್ಷ್ಮಿ ತನ್ನ ಗಂಡನಿಗೆ ಹೇಳುತ್ತಾಳೆ.

ಆಧುನಿಕ ಎಂದರೇನು? ವಿದ್ಯೆ ಎಂದರೇನು? ಸ್ತ್ರೀವಾದ ಎಂದರೇನು? ಎಂಬ ಪ್ರಶ್ನೆಗಳಿಗೆ ಸುಲಭ ಉತ್ತರಗಳಿಲ್ಲ. ಎಲ್ಲ ಸಂದರ್ಭಗಳಲ್ಲಿ ಈ ಮೂರೂ ಅಂಶಗಳು ಕೈಕೈ ಹಿಡಿದು ನಡೆಯುವುದೂ ಇಲ್ಲ. ಆದರೆ ವಿದ್ಯೆ, ಸ್ತ್ರೀವಾದ ಎಲ್ಲವೂ ಸಂಘಪರಿವಾರದ ಪರಧಿಯೊಳಗೆ ಸಿಕ್ಕಿಕೊಂಡಾಗ ಇವುಗಳ ಯಾವ ಸ್ವರೂಪ ಪಡೆದು ಯಾವ ಅದಂಥಿ ಉದ್ಧಾರಕ್ಕೆ ಪಣತೊಟ್ಟು ಹೊರಡುತ್ತವೆ ಎಂಬುದಕ್ಕೆ ಲಕ್ಷ್ಮಿಯ ಪಾತ್ರವೇ ಮುಖ್ಯವಾದ ಉದಾಹರಣೆ.

ಭಾರತದ ಮುಸಲ್ಮಾನರು, ಕ್ರಿಶ್ಚಿಯನ್ನರು ಹಾಗೂ ಎಡಪಂಥೀಯರು ಹಿಂದೂಗಳಿಗೆ ಅನ್ಯಾಯ ಮಾಡಿದ ಆಪಾದನೆಯನ್ನು ಹೊತ್ತು ಕಟಕಟೆಯಲ್ಲಿ ನಿಂತು ಬಿಟ್ಟಿದ್ದಾರೆ ಎನ್ನುವುದು ಈ 'ಆವರಣ'ದ ಸ್ಥಿತಿ ಗತಿಯಾಗಿದೆ. ಆರೋಪವನ್ನು ಸಾಬೀತು ಪಡಿಸಿ ಆರೋಪಿಗಳನ್ನು ಅಪರಾಧಿಗಳನ್ನಾಗಿಸುವುದನ್ನೇ ಉದ್ದೇಶವನ್ನಿಟ್ಟುಕೊಂಡ ಬರಹಕ್ಕೆ ಮೊಕದ್ದಮೆ ಗೆಲ್ಲುವ ತರ್ಕ ಮುಖ್ಯವೇ ಹೊರತು ಕಥನವಲ್ಲ.

ಭೈರಪ್ಪನವರು ಕತೆಯನ್ನು ನಿರೂಪಿಸುತ್ತಿರುವ ವಿಧಾನದಲ್ಲಿ ಕಥಾವಸ್ತುವಿನ ಒಳಗಿರುವ ಬೇರೆ ಬೇರೆ ಆಶೆ ಆಕಾಂಕ್ಷೆಗಳನ್ನು ನಿರೂಪಿಸಲು ಸಾಧ್ಯವಾಗಲಾರದು ಎನಿಸಿದಾಗ ಕತೆಯೊಳಗೆ ಇನ್ನೊಂದು ಕತೆಯನ್ನು ತಂದು ನಿರೂಪಣೆಯ ವಿಸ್ತಾರವನ್ನು ಪಡೆಯುವುದು, ಆ ಮೂಲಕ ಕಡೆಗೆ ಬಹುರೂಪದ ಶಕ್ತಿಯನ್ನು ಕೂಡಲು ಪ್ರಯತ್ನಿಸುವುದು ಕತೆಗಾರರ ಜಾಣ್ಮೆ ಎನ್ನಬಹುದು.

'ಆವರಣ'ದಲ್ಲೂ ಹಾಗೆ ಆಗಿದೆ ಕಾದಂಬರಿಯೊಳಗೊಂದು ಕಾದಂಬರಿ ಉಂಟು. ಆದರೆ, ಅದರ ಉದ್ದೇಶ 'ಕಾದಂಬರಿಕಾರರ' ಆಶಯಕ್ಕಿಂತ ವಿಭಿನ್ನವಾದ ಕಥನಾ ನಿರೂಪಣೆಯಲ್ಲ; ಮೂಲ ಕಾದಂಬರಿಗೇ ಕಥನ ವ್ಯರ್ಜ್ಯವಾಗಿದ್ದ ಮೇಲೆ ಆ ಕಾದಂಬರಿಗಾದರೂ ಆ ಹಂಗು ಯಾಕೆ ಎನ್ನುವ ಹಾಗೆ, ಭೈರಪ್ಪ, ದೊಡ್ಡ ವಕೀಲರ ವಾದಕ್ಕೆ ದಾಖಲೆಗಳನ್ನು ಒದಗಿಸುವ ಸಣ್ಣ ವಕೀಲನ ಕೆಲಸವನ್ನು ಈ ಮರಿ ಕಾದಂಬರಿಗೆ

ವಹಿಸಿಕೊಟ್ಟಿದ್ದಾರೆ. ಹಾಗಾಗಿ, ಔರಂಗಜೇಬನ ಕಾಲದ ಆಕ್ರಮಣಗಳಿಗೆ ಇಂದಿನ ಭಾರತದ ಮುಸಲ್ಮಾನರು ಯಾಕೆ ಹೊಣೆಗಾರರಾಗಬೇಕು ಎಂದು ಯಾರೂ ಕೇಳುವ ಹಾಗಿಲ್ಲ"…. ನಮ್ಮ ಹಿಂದಿನವರು ಮಾಡಿದ ತಪ್ಪುಗಳನ್ನು ಪ್ರಾಂಜಲವಾಗಿ ಅರಿತು ಒಪ್ಪಿಕೊಳ್ಳುವ ಹೊಣೆಗಾರಿಕೆ ಬೇಡವೆಂದರೆ ಆ ತಪ್ಪುಗಳನ್ನು ನಾವು ಸಮರ್ಥಿಸುತ್ತೀವಿ. ಅಂತಲೇ ಅರ್ಥ" ಹೀಗಾದಾಗ "ಹಿಂದಿನವರ ತಪ್ಪಿನ ಜವಾಬ್ದಾರಿಯನ್ನೂ ಹೊರಬೇಕಾಗುತ್ತದೆ.

'ಆವರಣ'ದಲ್ಲಿ ನಮ್ಮ ಊರುಕೇರಿಗಳಲ್ಲಿ ಕಾಣಬಹುದಾದಂತಹ, ಲೋಕಸ್ಥವಾದ ಒಂದೂ ಪಾತ್ರವೂ ಇಲ್ಲ. ಅದರ ನಾಯಕಿ ಲಕ್ಷ್ಮಿ ಉರುಫ್ ರಜಿಯಾ ಬೇಗಂ ಸೇರಿದ ಹಾಗೆ, ಎಲ್ಲ ಪಾತ್ರಗಳು ಕಾದಂಬರಿಕಾರನ ವಾದವನ್ನು 'ಸತ್ಯ'ವಾಗಿಸಲಿಕ್ಕೆ ಒದಗಿಬರುವ ಅಣುಕು ರೂಪಗಳು ಕಾದಂಬರಿಯಲ್ಲಿ ಮೂಡಿಬಂದಿವೆ.

ಬರಿ ಅಣುಕು ರೂಪುಗಳನ್ನೇ ಕಟ್ಟಿಕೊಂಡು ಭಾರತದ ಜನಸಮುದಾಯಗಳ ಬಗ್ಗೆ ಕಾದಂಬರಿ ಮಾಡುವ ಮೌಲ್ಯ ವಿವೇಚನೆಗೆ 'ನಾವು' ಮತ್ತು 'ಅವರು' ಎಂಬ ಭೇದವೊಂದೆ ನೈತಿಕ ಆಧಾರ. ಕೆಲವು ಉದಾಹರಣೆಗಳೇ ನಾವು ನೋಡಿದಾಗ–ಲಕ್ಷ್ಮಿ ಅಮೀರನನ್ನು ಪ್ರೇಮವಿವಾಹವಾಗಿ, ರಜಿಯಾಬೇಗಂ ಆಗಿ ಮತಾಂತರಗೊಂಡು, ಅತ್ತೆ–ಮಾವಂದಿರ ಜೊತೆ ಬದುಕಬೇಕಾಗುತ್ತದೆ. ಆ ಅತ್ತೆ–ಮಾವಂದಿರರು, ರಜಿಯಾ ಪೂರ್ವಾಶ್ರಮದ ಎಲ್ಲಾ ಮತಾಚರಣೆಗಳನ್ನು ಬಿಟ್ಟುಕೊಟ್ಟು, ಇಸ್ಲಾಂ ಧರ್ಮದ ಮತಾಚರಣೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಪೀಡಿತೊಡಗುತ್ತಾರೆ. ಎಡಪಂಥೀಯನಾದ ಅಮೀರನೂ ಹೊಂದಿಕೊಂಡು ಹೋಗುವುದು 'ಟ್ಯಾಕ್ಟಪುಲ್' ಎಂದೇ ಸಮಜಾಯಿಸಿ ನೀಡುತ್ತಾನೆ.

ಈ ಭಾಗದಲ್ಲಿ ಇಸ್ಲಾಮಿಕ್ ಮೂಲಭೂತವಾದ ಸಾಮಾನ್ಯ ಮುಸಲ್ಮಾನರಲ್ಲಿ ರಕ್ತಗತವಾಗಿಬಿಟ್ಟಿರುವ, ಸ್ತ್ರೀ ಸ್ವಾತಂತ್ರ್ಯವನ್ನು ದಮನವಾಡುವ ಬಗೆಗಳು ಕಟುಟೀಕೆಗಳು ಒಳಗಾಗುತ್ತವೆ. ಇಷ್ಟೇ ಆಗಿದ್ದರೆ ಅದು ಸಂಸಾರವೊಂದರ ಇಕ್ಕಟ್ಟಾಗುತ್ತಿತ್ತು. ಮುಸಲ್ಮಾನರನ್ನು ಸಾಮಾನ್ಯ ಜನರನ್ನಾಗಿ, ನಿತ್ಯ ಸಂಸಾರದ ರಗಳೆ ಹೊತ್ತುಕೊಂಡವರನ್ನಾಗಿ ಕಾಣುವುದು ಈ ಕಾದಂಬರಿಯ ಜಾಯಮಾನವಲ್ಲ.

ಈ ಕಾದಂಬರಿಯ ಪ್ರಕಾರ ಮುಸ್ಲಿಂ ಸಮುದಾಯದಲ್ಲಿ ವೈಯಕ್ತಿಕತೆ ಸಂಸಾರ ಸ್ವಾಯತ್ತತೆಗಳಿಗೆ ಅವಕಾಶವೇ ಇಲ್ಲ; ಯಾಕೆಂದರೆ, ಪ್ರತಿಯೊಂದು ಮುಸ್ಲಿಂ ಕುಟುಂಬದಲ್ಲಿ ಧರ್ಮ ಮತ್ತು ಸಂಪ್ರದಾಯಗಳನ್ನು ಚಾಚೂತಪ್ಪದೆ ಪಾಲಿಸುವುದನ್ನು ಪರಿಶೀಲಿಸುವುದಕ್ಕೆಂದೇ ಎಲ್ಲೆಲ್ಲಿಯೂ ಬೇಹುಗಾರರನ್ನಿಟ್ಟಿರುತ್ತಾರೆ. ಇದು ಮುಸ್ಲಿಮರ ಮಡಿವಂತಿಕೆ; ಸಾಂಪ್ರದಾಯಿಕತೆಯ ಮೌಲ್ಯ ವಿವೇಚನೆಯ ಬಗೆಯಾದರೆ, ಹಿಂದೂ ಕುಟುಂಬಗಳ ವಿಷಯದಲ್ಲಿ ವರಸೆ ಬದಲಾಗುತ್ತದೆ. ಲಕ್ಷ್ಮಿ ಧರ್ಮಾಂತರಗೊಂಡಿದ್ದಾಳೆಂಬ ಕಾರಣಕ್ಕೆ ಅವಳ ತಂದೆ ಅವಳ ಸಂಬಂಧವನ್ನೇ ಕಡಿದುಕೊಳ್ಳುವುದು. "ನೀನೊಬ್ಬಳು ಏನು ಮಾಡಿಕೊಂಡೆ ಅನ್ನುದೊಂದೆ ಅಲ್ಲ. ನಿನ್ನ ಹೊಟ್ಟೇಲಿ ಹುಟ್ಟುವ ಮಗುವೋ ಅದರ ಮಗುವೋ, ಯಾವುದೋ ಒಂದು ತಲೆಮಾರಿನ ಮಗುವು ನಮ್ಮ ದೇವಸ್ಥಾನವನ್ನು

ಒಡೆದು ನಾಶ ಮಾಡುತ್ತೆ. ಅದರ ಪಾಪ ನಿನಗೆ ತಟ್ಟುತ್ತೆ ಎಂದು ಲಕ್ಷ್ಮಿಯ ತಂದೆಯು ಹೇಳುತ್ತಾರೆ. ಆದರೆ ಆ ಸಮಯದಲ್ಲಿ ಲಕ್ಷ್ಮಿಯು ಯಾವುದನ್ನೂ ತಲೆಗೆ ಹಾಕಿಕೊಳ್ಳದೇ ತನಗೆ ಸರಿ ಅನಿಸಿದ್ದನ್ನು ಮಾಡುತ್ತಾಳೆ.[೫]

ತಂಗೆಯು ಸಾವಿನ ನಂತರ ಊರಿಗೆ ಹೋದ ಲಕ್ಷ್ಮಿ ಪ್ರಾಯಶ್ಚಿತ್ತ ಮಾಡಿಕೊಳ್ಳದೆ ತಂದೆಯ ಚಿತಾಭಸ್ಮ ವಿಸರ್ಜಿಸುವ ಹಾಗಿಲ್ಲ ಎನ್ನುವ ಹಿರಿಯ ಶಾಸ್ತ್ರಿಗಳ ಸಲಹೆ; ಎಡಪಂಥೀಯನಾಗಿ, ಕ್ರಿಶ್ಚಿಯನ್ ಹೆಂಗಸನ್ನು ಮದುವೆಯಾಗಿ, ಗೋಮಾಂಸ ಭಕ್ಷಣೆಯನ್ನು ಸಾರ್ವಜನಿಕವಾಗಿ ಸಮರ್ಥಿಸಿಕೊಂಡ ಮಗ ಪ್ರೊಫೆಸರ್ ಶಾಸ್ತ್ರೀಯ ಬಗ್ಗೆ ಹಿರಿಯ ಶಾಸ್ತ್ರಿಗಳು ತಾಳುವ ಕಟ್ಟುನಿಟ್ಟಾದ ಸಂಪ್ರದಾಯಸ್ಥ ನಿಲುವು; ಇವೆಲ್ಲ 'ಸ್ವಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವ ಗೌರವಾರ್ಹ ನಡುವಳಿಕೆಗಳಾಗಿ ನಿರೂಪಿತವಾಗುತ್ತವೆ.

ಲಕ್ಷ್ಮಿಯ ಮಗ ಮಜೀರ್ ಅಮೇರಿಕದ ಪೆಟ್ರೋಕೆಮಿಕಲ್ ಎಂಜನಿಯರಿಂಗ್ ಓದಿ, ಸೌದೀಅರೇಬಿಯದಲ್ಲಿ ದೊಡ್ಡ ಕೆಲಸದಲ್ಲಿದ್ದಾನೆ. ಆದರೂ ಐದು ಹೊತ್ತು ನಮಾಜು ಮಾಡುತ್ತ, ತನ್ನ ವೇಷಭೂಷಣಗಳಲ್ಲಿ, ಮಾತು ನಡಾವಳಿಕೆಗಳಲ್ಲಿ ಪಕ್ಕಾ ಸಂಪ್ರದಾಯವಾದಿ ಮುಸ್ಲಿಂನಾಗಿಬಿಟ್ಟಿದ್ದಾನಲ್ಲಾ ಎಂದು ಲಕ್ಷ್ಮಿಗೆ ಕಳವಳವಾಗುತ್ತದೆ. ಬಾಲ್ಯದಲ್ಲಿ ಮಗನನ್ನು ಅಮೀರನ ತಂದೆ-ತಾಯಿಗಳ ಬಳಿ ಬೆಳೆಯಲು ಬಿಟ್ಟಿದ್ದರಿಂದ ಅವರು ಈ ಮಡಿವಂತಿಕೆಯನ್ನು ಅವನಲ್ಲಿ ತುಂಬಿಬಿಟ್ಟಿದ್ದಾರೆ ಎಂದೂ ಲಕ್ಷ್ಮಿ ಹಲಬುತ್ತಾಳೆ.[೬]

ನಜೀರ ಯಾವಾಗಲೂ ಇಸ್ಲಾಂ ಧರ್ಮದ ಹಿರಿಮೆಯ ಕುರಿತು, ಆ ಧರ್ಮವನ್ನು ನಂಬದವರ ಮೌಢ್ಯದ ಕುರಿತೇ ಮಾತನಾಡುತ್ತಾನೆ; ವರ್ಷಾಂತರಗಳ ನಂತರ ತನ್ನ ಹೆತ್ತ ತಾಯಿಯನ್ನು ನೋಡಲು ಬಂದವನು, ಮಾತು ಶುರು ಮಾಡುವುದೇ ನಮಾಜ್ ಮಾಡುವುದರ ಹಿರಿಮೆಯ ಕುರಿತು; ಹೀಗೆ ನಜೀರನನ್ನು ಸೃಷ್ಟಿಸುವ ಭೈರಪ್ಪನವರು ಲಕ್ಷ್ಮಿಯ ಬಾಯಲ್ಲಿ "ಇಂಥವನಲ್ಲ ವೈಜ್ಞಾನಿಕ, ಉದಾರ ಭಾವನೆಯನ್ನು ತರಲು ಒಂದೆರಡು ದಿನ ಸಾಕಾಗುವುದಿಲ್ಲ ಎಂಬ ಮಾತನ್ನು ಆಡಿಸುತ್ತಾರೆ. ಇನ್ನೊಂದು ಕಡೆ, ವಿದೇಶದಲ್ಲಿ ವ್ಯಾಸಂಗಮಾಡಿ, ಬೆಂಗಳೂರಿನಲ್ಲಿ ಐ.ಟಿ. ಸ್ಥಾಪಿಸಿಕೊಂಡು ಸಾಕಷ್ಟು ಕಮಾಯಿ ಮಾಡಿಕೊಂಡು ಪ್ರೊ. ಶಾಸ್ತ್ರಿಗಳ ಮಗ-ಸೊಸೆ ಇದ್ದಾರೆ ಅವರು ಪ್ರೊ. ಶಾಸ್ತ್ರಿಗಳ ಹಾಗೆ ಎಡ ಪಂಥೀಯವರಲ್ಲ. ತಿರುಪತಿ, ವೈಷ್ಣೋ ದೇವಿಗಳಿಗೆ ಯಾತ್ರೆ ಮಾಡುವವರು; ಪೂಜೆ-ಪುಣ್ಯ ಕಾರ್ಯಗಳನ್ನು ನಡೆಸುವವರಲ್ಲ ಅಜ್ಜಿಯ ಕ್ರಿಯಾಕರ್ಮಗಳಿಗೆ ತನು, ಮನ, ಧನ ಸಹಾಯ ಮಾಡುವವರು, ಊರಿನ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಧಾರಾಳವಾಗಿ ದಾನ ಮಾಡುವವರು. ಈ ಸಂಗತಿಗಳನ್ನು ಲಕ್ಷ್ಮಿ ತುಂಬು ಮೆಚ್ಚುಗೆಯಿಂದ ಪ್ರೊಫೆಸರ್ ಶಾಸ್ತ್ರಿಗಳಿಗೆ ತಿಳಿಸುತ್ತಾಳೆ.[೭] ಪ್ರೊ. ಶಾಸ್ತ್ರಿಗಳ ಮಗಳು ಅರುಣ ಬೇರೆ ಧರ್ಮಗಳನ್ನು ಕೀಳಾಗಿ ಕಾಣುವ ಕ್ರಿಶ್ಚಿಯನ್ ತಾಯಿಯ ಕಾರಣವಾಗಿ ತನ್ನ ಮನೆಯಲ್ಲಿ ಹಿಂದೂ ಮತಾಚರಣೆ, ಹಬ್ಬ-ಹರಿದಿನ, ಊಟ-ಉಡಿಗೆಗಳ ಉಲ್ಲಾಸವೇ ಇಲ್ಲವಲ್ಲ ಎಂದು ಖಿನ್ನಳಾಗುತ್ತಾಳೆ. ಇಲ್ಲೇ ಒಂದು ಹಾಸ್ಯಾಸ್ಪದವಾದ ನಿರೂಪಣೆ ಇದೆ. ಅರುಣ ಗೋಕುಲಾಷ್ಟಮಿಯಂದು ತನ್ನ ಸ್ನೇಹಿತೆಯ ಮನೆಗೆ ಹೋಗಿರುತ್ತಾಳೆ (ಕೃಷ್ಣ) ವ್ಯಭಿಚಾರಿ, ಕಳ್ಳ, ಸುಳ್ಳ, ಅಂಥವನನ್ನು ದೇವರೆಂದು

ಪೂಜಿಸುವ ಧರ್ಮ ಎಷ್ಟು ನೀಚವಾದದ್ದು? ಎಂದು ಸೂಕ್ಷ್ಮವಾಗಿ, ಸೂಚ್ಯವಾಗಿ ಚರ್ಚಿನ ಪ್ರಚಾರಕರು ಹೇಳಿದ್ದು ಅವಳ ಮನಸ್ಸಿನಲ್ಲಿದೆ. ಆದರೆ, ಅವಳನ್ನು ಹಬ್ಬಕ್ಕೆ ಕರೆದ ಸ್ನೇಹಿತೆ ಒಳ್ಳೆಯವಳು; ಸ್ನೇಹಿತೆಯ ತಂದೆ ಎಫ್.ಆರ್.ಸಿ.ಎಸ್. ಮಾಡಿದ ಖ್ಯಾತ ಸರ್ಜನ್ ಮಾತ್ರವಲ್ಲದೆ, ಹಣ ಬರುವ ಖಾಸಗಿ ಪ್ರಾಕ್ಟಿಸ್ ಬಿಟ್ಟು ಸರ್ಕಾರಿ ವೈದ್ಯನಾಗಿ ಜನರ ಸೇವೆ ಮಾಡುತ್ತಿರುವವರು; ಅವರು ಕೃಷ್ಣನನ್ನು ಪೂಜಿಸುತ್ತಾರೆ. ಎಂದರೆ ಪ್ರಚಾರಕರು ಹೇಳಿದ್ದು ಸರಿಯಾ ಎಂದು ಅರುಣಾಳಿಗೆ ಗೊಂದಲವಾಗುತ್ತದೆ. ಪ್ರಸ್ತುತ ಕಾದಂಬರಿಯ ಮೌಲ್ಯ ವಿವೇಚನೆಯ ಪರಿ ಇದು! ಒಂದುವೇಳೆ ಸ್ನೇಹಿತೆಯ ತಂದೆ ಸಜ್ಜನನೂ, ಖ್ಯಾತನೂ, ಉನ್ನತ ವಿದ್ಯಾವಂತನೂ ಅಲ್ಲದಿದ್ದರೆ, ಕಾದಂಬರಿಯ 'ಪ್ರವಾಚಕ' ಹೇಳಿದ್ದು ಅರುಣಾಳಿಗೆ ಖಾತ್ರಿಯಾಗಿಬಿಡುತ್ತದೆಯೋ?

'ಆವರಣ'ದ ಪ್ರವೇಶವು ಅನೇಕ ಶಾಸ್ತ್ರ, ಪುರಾಣ, ಗ್ರಂಥಗಳಿಂದ ಸಂಗ್ರಹಿಸಿ ಎತ್ತಿಕೊಂಡು 'ಸತ್ಯ' ಎನ್ನುವುದು ಏನು ಅದಕ್ಕೆ ಒದಗುವ ಅಪಾಯಗಳೇನು ಎನ್ನುವುದನ್ನು ಪಟ್ಟಿಮಾಡಿ, ಮಹಾನ್ ದಾರ್ಶನಿಕ ಅರ್ಥದಲ್ಲಿ ಸತ್ಯಶೋಧ ಮಾಡುವುದು ಕಾದಂಬರಿಯ ಉದ್ದೇಶವೆಂದು ಹೇಳಿಕೊಳ್ಳುತ್ತದೆ.

ಈ ಕಾದಂಬರಿಯ ಪ್ರಕಾರ ಭಾರತದ ಪ್ರಭುತ್ವದ ಏಕಮೇವ ಗುರಿ ಇಸ್ಲಾಂ ಧರ್ಮದ ಆಕ್ರಮಣಕಾರಿ ಚರಿತ್ರೆಯನ್ನು ಬಯಲು ಮಾಡುವವರನ್ನು ಮೂಲೆಗೊತ್ತುತ್ತದೆ.

ಒಟ್ಟಿನಲ್ಲಿ ಕಾದಂಬರಿಕಾರರು ಕಾದಂಬರಿಯೊಳಗಿನ ಮರಿ ಕಾದಂಬರಿಯನ್ನು, ಮುಸಲ್ಮಾನರನ್ನು ಓಲೈಸಲು ಪ್ರಭುತ್ವವು ದಮನ ಮಾಡುವ ಪ್ರಸಂಗವನ್ನು ಕಲ್ಪಿಸುತ್ತಾರೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಈ ದೇಶದಲ್ಲಿ ಆಗುತ್ತಿರುವ ಅಭಿವ್ಯಕ್ತಿ ಸ್ವಾತಂತ್ರ್ಯ ದಮನದ ಕೆಲವು ಪ್ರಸಂಗಗಳು ಇವು ಎಂದು ಹೇಳಬಹುದು. ಗುಜರಾತ, ರಾಜಸ್ಥಾನ ಮತ್ತು ಕರ್ನಾಟಕದಲ್ಲಿ ಕ್ರೈಸ್ತ ಮತ ಪ್ರಚಾರಕರ ಮೇಲೆ ಹಲ್ಲೆ, ಎಂ. ಎಫ್. ಹುಸೇನರ ಕಲಾಕೃತಿಗಳ ಮೇಲೆ ದಾಳಿ ಹಾಗೂ ಅವರನ್ನು ಶಿಕ್ಷಿಸಬೇಕೆಂಬ ಒತ್ತಾಯ, ಇವೆಲ್ಲವುಗಳು ಮನುಷ್ಯನ ಸ್ವತಂತ್ರಕ್ಕೆ ಧಕ್ಕೆ ತರುವಂಥವು ಎನ್ನಬಹುದಲ್ಲವೆ?

ನಕಲಿ ಅಭಿವ್ಯಕ್ತಿ ಸ್ವಾತಂತ್ರ್ಯ ದಮನದ ಬಗ್ಗೆ ಉಚಾಯಿಸಿ ಮಾತನಾಡುವ ಕಾದಂಬರಿಗೆ ತನ್ನ ಕಾಲದ ಈ ದಮನಗಳು ಒಂದು ಚೂರು ತಟ್ಟುವುದಿಲ್ಲ. ಕಾದಂಬರಿಯು, ನಳಂದ ವಿಶ್ವವಿದ್ಯಾಲಯವೂ ಸೇರಿದ ಹಾಗೆ ಹಲವು ಪಂಡಿತ ಸಂಸ್ಥೆಗಳನ್ನು ಮುಸಲ್ಮಾನ್ ಆಕ್ರಮಣಕಾರರು ನಾಶಪಡಿಸಿದರು ಎಂದು ಆಕ್ರೋಶ ವ್ಯಕ್ತಪಡಿಸುತ್ತದೆ. ಲಕ್ಷ್ಮಿ ಬರೆದ ಕಾದಂಬರಿಯನ್ನು, ಅವಳ ತಂದೆ ಸಂಗ್ರಹಿಸಟ್ಟ ಪುಸ್ತಕಗಳನ್ನೂ ಮುಟ್ಟುಗೋಲು ಹಾಕಿಕೊಂಡು ಲಾರಿ ತುಂಬಿಸಿದ ಪೋಲಿಸರು ಪುಸ್ತಕಗಳನ್ನು ತುಳಿದುಕೊಂಡು ಲಾರಿಯಲ್ಲಿ ಕೂರುವುದನ್ನು ನೋಡಿದ ಲಕ್ಷ್ಮಿ "ಪುಸ್ತಕವು ಸರಸ್ವತಿಯ ಸ್ವರೂಪ, ಅದಕ್ಕೆ ತಪ್ಪಿ ಕಾಲು ಸೋಕಿದರೂ ಕಣ್ಣಿಗೆ ಒತ್ತಿಕೊಂಡೂ ಕ್ಷಮೆ ಪ್ರಾರ್ಥಿಸುವ ಸಂಸ್ಕೃತಿ ಇರಲಿ, ತುಳಿದು ಹಾಳುಮಾಡಬಾರದೆಂಬ ಲೌಕಿಕ ಸಂಸ್ಕೃತಿಯೂ ಇಲ್ಲವಲ್ಲ ಎಂದು ಅಂತರ್ಮುಖಿಯಾಗುತ್ತಾಳೆ.

## ಕೊನೆ ಟಿಪ್ಪಣಿಗಳು

೧. ಭಾಗೇಶ್ರೀ 'ಆವರಣ' ಎಂಬ ವಿ-ಕೃತಿ. ಆವರಣದೊಳಗೆ ಸಿಕ್ಕಿಕೊಂಡ ಜಾಣೆ. ಲಂಕೇಶ ಪ್ರಕಾಶನ ಪುಟ. ೫೫.
೨. ಎಸ್. ಎಲ್. ಭೈರಪ್ಪ, 'ಆವರಣ' ಸಾಹಿತ್ಯ ಭಂಡಾರ ಪ್ರಕಾಶನ, ಬೆಂಗಳೂರು. ಪುಟ ೧೯.
೩. ಅದೇ, ಪುಟ ೫.
೪. ಅದೇ, ಪುಟ ೨೪.
೫. ಅದೇ, ಪುಟ ೧೪೨.
೬. ಅದೇ, ಪುಟ ೧೪೫.
೭. ಅದೇ, ಪುಟ ೧೫೭.

## ಅಧ್ಯಾಯ ೩

## 'ಆವರಣ'ದೊಳಗೆ ಭೈರಪ್ಪನವರ ಆಲೋಚನೆಗಳು

'ಆವರಣ'ದ ಕಾದಂಬರಿ ಓದಿದ ಮೇಲೆ ಭೈರಪ್ಪನವರಿಂದ ಒಂದು ಸ್ಪಷ್ಟವಾದ ವಿಚಾರ ಹೊಳೆಯುತ್ತದೆ. ಸತ್ಯ, ಕಲೆ, ಸೌಂದರ್ಯಗಳೆಲ್ಲವೂ ಅವರ ಮತೀಯವಾದ ಆಲೋಚನೆಗಳ ಸರಕಾಗುತ್ತವೆ. ಸತ್ಯ ಮತ್ತು ಸೌಂದರ್ಯಗಳಿಗೆ ಸಾಹಿತ್ಯ ಕೃತಿಯೊಂದರಲ್ಲಿ ಸತ್ಯ ಮತ್ತು ಸೌಂದರ್ಯವನ್ನು ಕುರಿತಾಗಿ ಭೈರಪ್ಪನವರೆ ಹೇಳುತ್ತಾರೆ. ಹೋಲಿಕೆ ಮಾಡಿದಾಗ ಸಾಹಿತಿಯ ಅಂತಿಮ ನಿಷ್ಠೆ ಇರಬೇಕಾದದ್ದು ಸತ್ಯಕ್ಕೆ ಸತ್ಯವನ್ನು ಬಿಟ್ಟು ತಾನು ಕೇವಲ ಕಲಾ ನಿರ್ಮಾಪಕ ಎನ್ನುವ ಅಧಿಕಾರ ಸಾಹಿತಿಗಳಿಗೆ ಇಲ್ಲ. ಸತ್ಯ ಶೋಧನೆಯಲ್ಲಿ ಓದುಗನೂ ಲೇಖಕನಷ್ಟೆ ಪಾಲುದಾರ. ಪಾತ್ರಗಳನ್ನಾಗಲೀ ಸನ್ನಿವೇಶವಾಗಲೀ ಸತ್ಯದ, ಕಲಾಸತ್ಯದ ವಸ್ತು ನಿಷ್ಠೆಯಿಂದ ಗ್ರಹಿಸಿ ಅವುಗಳ ಭಾವವನ್ನು ಆಸ್ವಾದಿಸಬೇಕೇ ಹೊರತು ವೈಯುಕ್ತಿಕ ರಾಗದ್ವೇಷಗಳಿಂದ ಉದ್ರಿತಗೊಳ್ಳಬಾರದು.

ಭೈರಪ್ಪನವರ ಪ್ರಕಾರ, ಸತ್ಯ ಸೌಂದರ್ಯ, ಕಲೆ, ಕಲಾ ಸತ್ಯ ವಸ್ತು ನಿಷ್ಠೆ ಈ ಎಲ್ಲವೂ ಬೇರೆ ಬೇರೆ ಪ್ರಕಾರಗಳವು. 'ಆವರಣ' ಕಾದಂಬರಿಯು ಒಂದು ಇತಿಯಾಸವೊ, ಸಂಶೋಧನೆಯೊ ಅಥವಾ ಕಾದಂಬರಿಯೋ ಮತೀಯವಾದಿ ಚರ್ಚೆಯೋ ಎಂಬುದರ ಜಿಜ್ಞಾಸೆ ಉಂಟಾಗುತ್ತದೆ.[೧]

ಅವರ ಪ್ರಕಾರ ಕಲೆ ಬೇರೆ, ಸತ್ಯ ಬೇರೆ ಅಂದಹಾಗಾಯಿತು. ಸತ್ಯ ಬೇರೆ ಸೌಂದರ್ಯ ಬೇರೆ ಎಂಬ ಧೋರಣೆ ಪ್ರತಿಪಾದಿಸುವಂತಾಯಿತು. ಅವರು ಹೇಳಿದ ಪ್ರಕಾರ ಮುಂದುವರೆದರೆ ಧರ್ಮ ಬೇರೆ, ಸತ್ಯ ಬೇರೆ ಎಂದು ತೀರ್ಮಾನಿಸಿ ಬಿಡಬಹುದು. ಧರ್ಮ ಮತ್ತು ಕಲೆ ಎರಡೂ ಬೇರೆ ಬೇರೆ ಎಂದೂ ಹೇಳಿಬಿಡಬಹುದು. ಹೀಗಾಗಿಯೇ ಬೇರಿನಲ್ಲಿಯೇ ಅವರ ಇಡೀ ಕಾದಂಬರಿಯ ಆಲೋಚನೆಗಳು ಎಷ್ಟು ಟೊಳ್ಳು ಎಂದು ಸ್ಪಷ್ಟವಾಗುತ್ತದೆ.

ಕಲೆ ಎಂಬುದು ವ್ಯಕ್ತಿಯ ಪ್ರಜ್ಞೆಯ ಅಂತರಾಳಕ್ಕೆ ಮಿಂಚಿನಂತೆ ಹೊಳೆದು, ಕ್ಷಣ ಭಾಸವಾಗಿ ಮರುಕ್ಷಣ ಮಾಯವಾಗಿಬಿಡುವ ಸತ್ಯದ ಅನುಭವಗಳ ಅಂತರಾಳದ ಗುಟ್ಟುಗಳ

ಅಭಿವ್ಯಕ್ತಿ. ಈ ಅನುಭವಕ್ಕೆ ನಮ್ಮ ಇಡೀ ವ್ಯಕ್ತಿತ್ವ ಎಷ್ಟು ಕ್ರಿಯಾಶೀಲವಾಗಿ ಸ್ಪಂದಿಸಿ ಆ ಕ್ಷಣದ ಹೊಳುವುಗಳನ್ನು ಶಬ್ದ, ಬಣ್ಣ, ನಾದಗಳಲ್ಲಿ ಹಿಡಿದಿಡುತ್ತದೆಯೋ ಅಷ್ಟರಮಟ್ಟಿಗೆ ನಮ್ಮ ಕಲಾಸೃಷ್ಟಿ ಪ್ರಕೃತಿಗೆ, ಭವಿಷ್ಯಕ್ಕೆ, ನಿರಂತರ ಜೀವವಿಕಾಸ ಪ್ರಕ್ರಯೆಗೆ ಹತ್ತಿರವಾಗಿರುತ್ತದೆ. ಹಾಗಾಗಿ ಕಲೆಯೇ ಸತ್ಯ, ಕಲೆಯೇ ಸೌಂದರ್ಯ; ಇನ್ನೂ ಸ್ವಲ್ಪ ವಿವರಿಸಬಹುದಾದರೆ ಇಂದ್ರಿಯಗಳಿಗೆ ಗೋಚರವಾಗುವ, ಮಿದುಳಿಗೆ ಮಾತ್ರ ತಾಗುವ ಕ್ಷಣದ ಉದ್ರೇಕ, ಆವೇಶಗಳನ್ನು ಮಾತ್ರ ಪ್ರಚೋದಿಸುವ ನಮ್ಮ ಪ್ರತಿಕ್ರಿಯೆಗಳು, ನಮ್ಮ ಬರಹಗಳು ಕಲೆಯಾಗುವುದಿಲ್ಲ. ಚರ್ಮದ ಮೇಲ್ಮೈ ಪದರುಗಳನ್ನು ಮಾತ್ರ ಮುಟ್ಟುವ ನೆತ್ತರು ಕುದಿಸುವ, ಈ ಕ್ಷಣದ ವಾಸ್ತವವೇ ಅನಂತಕಾಲದ ಸತ್ಯವೆಂಬಭ್ರಮೆಗೆ ಒಳಪಡುವ ಯಾವುದೂ ಕೂಡ ಕಲೆ ಎಂದೆನ್ನಿಸಿಕೊಳ್ಳುವುದಿಲ್ಲ; ಸತ್ಯವೂ ಆಗುವುದಿಲ್ಲ. ದರ್ಶನ ಶಕ್ತಿಯಿರದ ಪ್ರಜ್ಞೆಗೆ ಕಲಾಸೃಷ್ಟಿ ಸಾಧ್ಯವಿಲ್ಲ.[೨]

ಆವರಣದಲ್ಲಿ ಭೈರಪ್ಪನವರು 'ಸತ್ಯ' ಎಂಬ ಶಬ್ದವನ್ನು ಬೇಕಾಬಿಟ್ಟಿಯಾಗಿ ಬಳಸಿದ್ದಾರೆ. ಇತಿಹಾಸದ 'ಸತ್ಯ'ದ ಸಂಪೂರ್ಣ ಯಜಮಾನಿಕೆ ತಮ್ಮದು ಎಂಬ ಅಹಂಕಾರ ಪುಟ ಪುಟಪುಟಗಳಲ್ಲಿ ಡಾಳಾಗಿ ಕಾಣುತ್ತಾ ಹೋಗುತ್ತದೆ ಈ ಕೃತಿಯಲ್ಲಿ 'ಸತ್ಯವನ್ನು ತಮ್ಮ ಸ್ವತ್ತಾಗಿ ಮಾಡಿಕೊಂಡಿದ್ದು ಗಮನಿಸಬಹುದು. 'ಆವರಣ'ದಲ್ಲಿ ತಾವು 'ಸತ್ಯ'ದ ವಿಷಯದಲ್ಲಿ ಅಜೇಯರು ಎಂಬುದನ್ನು ಪದೇ ಪದೇ ಪ್ರದರ್ಶಿಸುತ್ತಾ ಹೋಗಿದ್ದಾರೆ ಈ ಪುಸ್ತಕ ಓದುತ್ತ ಹೋದಂತೆ ಅವರ ಆಲೋಚನೆಗಳು ಸ್ಪಷ್ಟವಾಗಿ ಗೋಚರವಾಗುತ್ತವೆ.

ಇತಿಹಾಸದ ಪುಟಗಳಿಂದ ಅವರು ಆಯ್ದು ಶೇಖರಿಸಿವ ಮಾಹಿತಿಗಳು 'ಸತ್ಯ'ಗಳಲ್ಲಿ, ಅವು ಕೇವಲ ವಾಸ್ತವಾಂಶಗಳು, ಫ್ಯಾಕ್ಟ ಅಷ್ಟೆ. ವಾಸ್ತವ ಎಂಬುದು ಸತ್ಯವಲ್ಲ. ವಾಸ್ತವ ಎಂಬುದು ನಮ್ಮ ಹೊರಗೇ ಇರುವುದು. ಒಂದು ಸನ್ನಿವೇಶ ಘಟನೆ ಅಷ್ಟೆ. ಅವು ಸತ್ಯಗಳಾಗುವುದಿಲ್ಲ. ಸತ್ಯವೆಂಬುದು ಅತ್ಯಂತ ಖಾಸಗಿ ಅನುಭವ. ತುಂಬ ವೈಯಕ್ತಿಕ ಅಂತರಂಗದ ವಿಷಯ. ಹೊರಗಿನ ವಾಸ್ತವಗಳು ಮನುಷ್ಯ ಸಂಬಂಧಗಳು, ನಾವು ಪಡೆದುಕೊಂಡು ಬಂದ ಪರಂಪರೆ, ಸಧ್ಯದ ನಿಜಗಳು, ಒತ್ತಡಗಳು ನಮ್ಮ ಬದುಕಿನ ದೃಷ್ಟಿ ಭವಿಷ್ಯದ ಕಲ್ಪನೆ ಇವುಗಳೆಲ್ಲವೂ ಮತ್ತು ಶಬ್ದಗಳಿಗೆ ಸಿಗದೇ ಹೋಗಿ ಎಂದೂ ನಮ್ಮನ್ನು ಕಾಡುತ್ತ, ಪೀಡಿಸುತ್ತ ಆಕರ್ಷಿಸುತ್ತಾ ಹೋಗುವ ಮತ್ತೊಂದು ಅಗೋಚರ; ನಿಗೂಢ ತುಡಿತ–ಇವುಗಳೆಲ್ಲದರ ವೈವಿಧ್ಯಮಯ ಮಿಶ್ರಣದಿಂದ ಅರಳುವುದು ಸತ್ಯವೆಂಬುದು. ಅನೇಕ ವೇಳೆ ಈ ಎಲ್ಲ ಮಿಶ್ರಣದಿಂದ ಸತ್ಯವೆಂಬುದು ಅರಳದೆಯೂ ಹೋಗಬಹುದು. ದುರದೃಷ್ಟವಶಾತ್ ನೂರಕ್ಕೆ ತೊಂಬತ್ತೊಂಭತ್ತು ಪಾಲು ಅರಳುವುದೇ ಇಲ್ಲ. ಎಲ್ಲೋ ಅಲ್ಲೊಂದು ಇಲ್ಲೊಂದು ಅರಳಿದವು ತನ್ನ ಕೆಂಪು, ಬಣ್ಣ, ಸೌಂದರ್ಯಗಳಿಂದ ಬಹುಕಾಲ ಮನುಷ್ಯ ಕುಲದಲ್ಲಿಯೇ ಬದುಕಿಗೆ ಒಂದು ಅರ್ಥವಿದೆ ಎಂಬ ವಿಶ್ವಾಸ ಮೂಡಿಸುತ್ತದೆ. ಬದುಕಿನ ಬಗ್ಗೆ ಉತ್ಸಾಹ ಸ್ಫುರಿಸುತ್ತದೆ. ಸತ್ಯವೆಂಬುದು ನನ್ನ ಮತ್ತು ನನ್ನ ಸುತ್ತಲ ಜಗತ್ತಿನ ಕುರಿತಾದ ನೂರು ರೀತಿಯ ಸಂಬಂಧಗಳಿಗೆ ಹೊಸ ಹೊಸ ಕಾಣ್ಕೆಗಳನ್ನು ನೀಡುತ್ತ ಹೋಗುತ್ತದೆ ನನ್ನ ಮತ್ತು ಸುತ್ತಲ ಪ್ರಕೃತಿಯ ಮಧ್ಯದ ನಂಟು ಬೆಳೆಸುತ್ತ

ಹೋಗುತ್ತದೆ. ವಿನಯ ಮತ್ತು ಹೆಮ್ಮೆ ಎರಡೂ ಏಕಕಾಲಕ್ಕೆ ಸಾಧ್ಯವಾಗುವ ಅನುಭವ ಇದು ಮತ್ತು ಸತ್ಯವೆಂಬುದು ಎಂದಿಗೂ ಔದಾರ್ಯ ಭಾವವನ್ನು ಮೂಡಿಸುತ್ತದೆ; ಬೆಳೆಸುತ್ತದೆ ಎಂದೇ. ಸತ್ಯವೆಂಬುದು ಎಂದೂ ಅಹಿಂಸಾ ಧರ್ಮದ ಇನ್ನೊಂದು ಮುಖ, ಇನ್ನೊಂದು ರೂಪ, ಹಿಂಸೆಗೆ, ಅಸಹನೆಗೆ, ದ್ವೇಷ ಕ್ರೋಧಗಳಿಗೆ ಪ್ರಚೋದಿಸುವುದು ಸತ್ಯವಲ್ಲ-ಎಂದಿಗೂ. ಕಲೆ ಎಂಬುದು ಮನುಷ್ಯ ನಿರ್ಮಿತ ಇಲ್ಲ ಕಟ್ಟಳೆ, ನಿರ್ಬಂಧಗಳನ್ನು ಎಲ್ಲ ರೀತಿಯ ಗೋಡೆಗಳನ್ನು ಭೇದಿಸುತ್ತ, ಕೆಡುವುತ್ತ ಹೋಗುತ್ತದೆ. ತನ್ನ ನಶ್ವರ ಅಸ್ತಿತ್ವದಲ್ಲಿ ಶಾಶ್ವತತೆಯ ಇಣುಕು ನೋಟವಾದರೂ ಸಾಧ್ಯವೇ ಎಂದು ಹುಡುಕುತ್ತಾ ಹೋಗುತ್ತಾನೆ ಕಲಾವಿದ. ಹಾಗೆಂದ ಮಾತ್ರಕ್ಕೆ ನಡೆದುಬಂದ ದಾರಿ, ಪರಂಪರೆ, ಇತಿಹಾಸ ನಮೂದಿಸುವ ಘಟನೆಗಳು ಇವು ಪ್ರಸ್ತುತಗಳಲ್ಲವೆಂದಲ್ಲ. ಅವೆಲ್ಲವೂ ನಾವು ಉಸಿರಾಡುವ ಗಾಳಿಯ ಭಾಗವೇ ಆಗಿರುತ್ತದೆ. ಆದರೆ ಇವು ಯಾವುವೂ ಸತ್ಯಗಳಲ್ಲ. ಬಹುಶಃ ಈ ಎಲ್ಲವೂ ಈ ಕ್ಷಣದಲ್ಲಿ ಮಾತ್ರ ಸಲ್ಲುವುದಕ್ಕೆ ಯತ್ನಿಸುವ, ಮತ್ತು ಅಷ್ಟರಲ್ಲೇ ಸಾರ್ಥಕತೆ ಪಡೆದುಕೊಳ್ಳುವವನಿಗೆ ಮಾತ್ರ ಮುಖ್ಯವೂ, ಅಂತಿಮ ಸತ್ಯವೂ ಆಗುತ್ತದೆ. ಇಂಥದುರಿಂದಲೇ ಅಹಂಕಾರ ಹುಟ್ಟುವುದು. ಇದೇ ತಮಸ್ಸು. ಈ ತಮಸ್ಸಿನಿಂದ ಜ್ಯೋತಿಯೆಡೆಗೆ ಗಮಿಸುವುದು ಹೇಗೆ? ಇದು ಅಸತ್ಯವೂ ಕೂಡ. ಹಾಗಾದರೆ ಸತ್ಯದೆಡೆಗೆ ಚಲಿಸುವುದೆಂತು? ಇವು ಸತ್ಯಾನ್ವೇಷಕನ ಕಳಕಳಿಗಳು. ಅವನ ನಿರಂತರ ಗುಂಗು. ಉಪನಿವೃತ್ಯ ಕಾಲದ ಋಸಿಗಳಿಂದ ಹಿಡಿದು. ಇಂದಿನ ಕವಿ, ಕಲಾವಿದ, ಸಂಗೀತಗಾರ ಎಲ್ಲರೂ ಇದೇ ಅನ್ವೇಷಣೆಯಲ್ಲಿಯೇ ತೊಡಗಿರುವುದು.

ಮನುಷ್ಯನ ಸದ್ಯದ ಭಾರತದಲ್ಲಿನ ಹಿಂದೂ ಸಮಾಜದ-ಸ್ಥಿತಿಗೆ ಸಮಾಜದ ಬಾಹ್ಯಂಶಗಳಲ್ಲಿ ಕಾರಣಗಳನ್ನು ಹುಡುಕುವುದು ಅವರ ರೀತಿ. ಹಿಂದೂ ಧಾರ್ಮಿಕ ಭಾವನೆಗಳಿಗೆ, ಸಂಕೇತಗಳಿಗೆ ಒಟ್ಟು ಬದುಕಿನ ರೀತಿಗೆ ಶತಮಾನಗಳ ಕಾಲ ಆಗಿರುವ ಆಘಾತಗಳಿಗೆ ಆಕ್ರಮಣಶೀಲ, ದಮನಕಾರಿ, ಮತಾಂಧ ಮುಸ್ಲಿಂ ಆಳ್ವಿಕೆಯೇ ಹೊಣೆ ಎಂದು ಸಾಧಿಸಿ ತೋರುವುದು ಭೈರಪ್ಪನವರ ಸತ್ಯದರ್ಶನದ ರೀತಿ. ಹಿಂದೂ ಮುಗ್ಧ, ದುರ್ಬಲ, ಬಲಿಪಶು ಮಾತ್ರ.

ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳೇ ಆಗುತ್ತಿದ್ದರೂ ನಮ್ಮ ಚಿಂತನಾಕ್ರಮದಲ್ಲಿ 'ಅವರು-ನಾವು' ಎಂಬ ರೀತಿಯಲ್ಲಿ ಬದಲಿಸಿಕೊಳ್ಳಲೇ ಇಲ್ಲ. ಬದಲಾಗಿ ಈ ರೀತಿಯ ಯೋಚನಾಕ್ರಮ ಮತ್ತೂ ಹೆಚ್ಚಾಗುತ್ತಿದೆ. ಈ ದೇಶದ ಹಕ್ಕುದಾರರು ನಾವು. ಯಜಮಾನಿಕೆ ನಮ್ಮದು. ಅಲ್ಪಸಂಖ್ಯಾತರು-ಅದರಲ್ಲೂ ಮುಸಲ್ಮಾನರು-ಎಂದಿಗೂ ಹೊರಗಿನವರು. ಅನುಮಾನಾಸ್ಪದರು ಎಂದೇ ಅವರು ಹೆಜ್ಜೆಹೆಜ್ಜೆಗೂ ತಮ್ಮ ನಿಷ್ಠೆಯನ್ನು ಸಾಬೀತಗೊಳಿಸುತ್ತಿರಬೇಕು. ಅವರು ಎಷ್ಟರಮಟ್ಟಿಗೆ ನಂಬಿಕೆಗೆ ಅರ್ಹರು ಎಂಬುದನ್ನು ಅಳೆಯುವುದು, ಅರ್ಹತಾಪತ್ರ ನೀಡುವುದು. ಈ ಎಲ್ಲವೂ 'ನಾವು' ಬಹುಸಂಖ್ಯಾತರು, ಹಿಂದೂಗಳು.

ಟಿಪ್ಪು, ಔರಂಗಜೇಬ ಇವರುಗಳೆಲ್ಲರ ಮತಾಂಧ ಕೃತ್ಯಗಳ ಕುರಿತಾಗಿ ಇಂದಿನ ಮುಸಲ್ಮಾನರಿಗೆ 'ಅರಿವಾಗಿ' ಅವರು 'ತಿದ್ದಿಕೊಳ್ಳಬೇಕು' ಹಾಗೆ ತಿದ್ದಿಕೊಳ್ಳಲು' ಮೊದಲು ತಪ್ಪಿನ ಅರಿವಾಗಬೇಕು. ಇತಿಹಾಸದ ಸತ್ಯದರ್ಶನವಾಗದೆ ತಿದ್ದಿಕೊಳ್ಳುವುದಾದರೂ ಹೇಗೆ? ಅದಕ್ಕಾಗಿಯೇ ಭೈರಪ್ಪನವರು ಈ ಗ್ರಂಥ ರಚನೆ ಮಾಡಿರುವುದು. ಯಾರನ್ನು ಹೀಯಾಳಿಸುವುದು, ಕೆರಳಿಸುವುದು, ಉದ್ರೇಕಿಸುವುದು 'ಇತಿಹಾಸ ಉದ್ದೇಶವಲ್ಲ' ತಮ್ಮ ಪೂರ್ವಿಕರೆಂದು ಭಾವಿಸುವವರ ಸರಿ ತಪ್ಪುಗಳನ್ನು ವಿಶ್ಲೇಷಿ ತಮ್ಮ ಜೀವಮಾರ್ಗವನ್ನು ರೂಪಿಸಿಕೊಳ್ಳಲು ಸತ್ಯಕ್ಕೆ ಬಣ್ಣಕಟ್ಟದೆ ಮುಖಾಮುಖಿಯಾಗುವ ಪ್ರಮಾಣಿಕತೆ ಬೇಕು. ಹಿಂದಿನವರು ಮಾಡಿದ ತಪ್ಪುಗಳನ್ನು ಪ್ರಾರಂಭವಾಗಿ ಅರಿತು, ಒಪ್ಪಿಕೊಳ್ಳುವ ಹೊಣೆಗಾರಿಕೆ ಬೇಡವೆಂದರೆ ಈ ತಪ್ಪುಗಳನ್ನು ತಾವು ಸಮರ್ಥಿಸುತ್ತೀವಿ ಅರ್ಥ.

ಭೈರಪ್ಪನವರ ಪ್ರಕಾರ ತಮ್ಮ ಪೂರ್ವಿಕರು ತಪ್ಪು ಒಪ್ಪಿಕೊಂಡು ಬಹುಶಃ ಕ್ಷಮೆ ಕೇಳಬೇಕು. ಈ ಪೂರ್ವಿಕರು ಯಾರು? ಮಹಾರಾಜರುಗಳು, ಸುಲ್ತಾನರು, ಮತಾಂಧ ಸೇನಾಪತಿಗಳು ಮತ್ತು ಅವರ ಆಜ್ಞಾವರ್ತಿಗಳಾದ ಅಧಿಕಾರಿಗಳು, ಸೈನಿಕರು. ಇಂದು ನಮ್ಮ ಸುತ್ತಲಿರುವ ಈ ಕೋಮಿಗೆ ಸೇರಿದ ಶೇಕಡ ಹತ್ತರಲ್ಲಿ ತೊಂಭತ್ತೊಂಭತ್ತು ಭಾಗ ಬಡವರು, ಅನಕ್ಷರಸ್ಥರು, ನಿರುದ್ಯೋಗಿಗಳು. ಇವರುಗಳಿಗೂ ಇವರ ಮತಾಂಧ ಪೂರ್ವಿಕರಿಗೂ ಏನು ಸಂಬಂಧ ಎಂದು ಭೈರಪ್ಪನವರು ಕಲ್ಪಿಸಿಕೊಂಡಿದ್ದಾರೆ ಎಂದು ತಿಳಿಯುದಾಗಿದೆ.

ಮತಾಂಧದಂತಹ ಪರಧರ್ಮ ವಿರೋಧಿ ಚಟುವಟಿಕೆಗಳ ಬಗ್ಗೆ ಅದೇ ಕೋಮಿನ ಜನತೆಯ ಬೆಂಬಲ ಪಡೆದಿತ್ತು, ಅವರು ಎಸಗಿದ ಅಕೃತ್ಯಗಳ ಬಗ್ಗೆ ಪೂರ್ವಭಾವಿಯಾಗಯೇ ಎಷ್ಟು ತಿಳಿದಿತ್ತು. ಅಥವಾ ಹೀಗೆ ಅನಾಹುತಗಳು ನಡೆದು ಹೋದ ಮೇಲೆ ಇದೇ ಜನ-ಬಡ, ಅನಕ್ಷರಸ್ಥ, ನಿರುದ್ಯೋಗಿ-ಮುಸಲ್ಮಾನ ಜನತೆ ಹೇಗೆ ಪ್ರತಿಕ್ರಿಯಿಸಿದರು, ಎಷ್ಟು ಸಂಭ್ರಮಪಟ್ಟರು-ಇವು ನಮಗೆ ಗೊತ್ತಿಲ್ಲ.

ಭೈರಪ್ಪನವರು ಅಧಿಕಾರ ವರ್ಗದ, ಶ್ರೀಮಂತ ಪ್ರಭುವರ್ಗದ ಪ್ರತಿಕ್ರಿಯೆಗಳು, ಅವರ ಸಂಭ್ರಮಗಳನ್ನು ಮಾತ್ರ ನಮೂದಿಸುತ್ತಾರೆ. ಅದು ಸಹಜವಿರಬಹುದು, ಆದರೆ ಅವರು ಭ್ರಮಿಸುವ ಹಾಗೆ ಅದು ಸತ್ಯವಲ್ಲ. ಅಂದರೆ ನೂರಕ್ಕೆ ಎರಡರಷ್ಟು ಇರುವ ಪ್ರಭುವರ್ಗ ಜನಸಾಮಾನ್ಯರ ಭಾವನೆಗಳನ್ನು ಅನುಭವಗಳನ್ನು ಪ್ರತಿನಿಧಿಸಲು ಸಾಧ್ಯವಿಲ್ಲ, ಇತಿಹಾಸವೆಂದರೆ ಅಧಿಕಾರಶಾಹಿ ಪ್ರಭುಗಳ ಇತಿಹಾಸವೆಂದೇ ನಂಬಿರುವ ವರ್ಗಕ್ಕೆ ಸೇರಿದವರು ಭೈರಪ್ಪನವರು. 'ಇತಿಹಾಸ', 'ಸಂಶೋಧನೆ' 'ಸತ್ಯ' ಎಂದೆಲ್ಲ ಹೇಳುವ ಭೈರಪ್ಪನವರಿಗೆ ಬಹುಪ್ರಾಥಮಿಕ ಸತ್ಯವೊಂದು ಯಾಕೆ ಮನದಟ್ಟಾಗುವುದಿಲ್ಲ ಎಂಬುದೇ ಆಶ್ಚರ್ಯದ ಸಂಗತಿ. ಇತಿಹಾಸದಲ್ಲಿ ಕೆಲವು ಘಟನೆಗಳು ಜರುಗಿಹೋಗುತ್ತವೆ. ಶೈವರು, ವೈಷ್ಣವರು ಇಬ್ಬರೂ ಸೇರಿ ಬೌದ್ಧ, ಜೈನರ ಮಂದಿರಗಳು, ವಿಹಾರಗಳು, ಬಸದಿಗಳನ್ನು ನಾಶಮಾಡಿರಬಹುದಾದರೆ ಹೊರಗಿನಿಂದ ಬಂದ ಧರ್ಮ ಪ್ರಸಾರವೇ ಪ್ರಧಾನ ಗುರಿಯಾಗಿರುವ ಶಕ್ತಿಗಳನ್ನು ಬೇರೆ ಬೇರೆ ರೀತಿ

ನಡೆದುಕೊಳ್ಳಲು ಬಯಸುವುದು ಎಷ್ಟು ಸರಿ? ಧರ್ಮಾಂಧತೆಯುಂದೇ ಅವರನ್ನು ಉತ್ತೇಜಿಸುವ, ಕುಮ್ಮಕ್ಕು ನೀಡುವ ಚಾಲನಶಕ್ತಿಯಾಗಿರುವಾಗ ಜೊತೆಗೆ ಅಧಿಕಾರ, ತೋಳು ಬಲವೂ ಇರುವಾಗ ಸ್ಥಳೀಯರಿಗಿಂತ ಹತ್ತು ಪಟ್ಟು ಹೆಚ್ಚು ಅನಾಹುತಗಳನ್ನು ಮಾಡಿಯೇ ಮುಂದುತ್ತಾರೆ. ಇತಿಹಾಸ ತಿಳಿದ ಯಾವನೇ ಸಾಮಾನ್ಯನಿಗೂ ಈ ವಿಷಯ ಅರ್ಥವಾಗುತ್ತದೆ, ಭೈರಪ್ಪನವರಂಥ ಸಂಶೋಧನಾಶೀಲ ಪಂಡಿತರಿಗೆ ಹೇಗೆ ತಿಳಿದಿಲ್ಲವೋ ದೇವರಿಗೆ ಗೊತ್ತು.

ಮಂದಿರ ನಾಶ ಯಾವ ಹಿಂದೂ ಪ್ರಜೆಗೂ ಒಪ್ಪಿಕೊಳ್ಳುವುದಿರಲಿ ಸಹಿಸಲೂ ಸಾಧ್ಯವಾಗದಂಥ ಆಘಾತ. ರಕ್ತ ಕುದಿಸುವಂಥ ವಿಷಯ ಅದು. ಅದಕ್ಕಾಗಿಯೇ ಇದಕ್ಕೆ ಕಾರಣಕರ್ತಕರು ಪರಮಶತ್ರುಗಳಾಗಿ ಕಾಣುವುದರಲ್ಲಿ ಅಚ್ಚರಿಯಿಲ್ಲ. ಅದು ಹಿಂಸೆಯಾಗಿ ತಿರುಗುವುದು ಮುಂದಿನ ಅನಿವಾರ್ಯ ಹೆಜ್ಜೆ ಅಥವಾ ಹಿಂಸಾಮನಃ ಸ್ಥಿತಿ ಒಂದು ಸ್ಥಾಯಿಭಾವವಾಗಿ ನಿಮ್ಮ ಪ್ರಜ್ಞೆಯಾಳದಲ್ಲಿ ನೆಲೆಸಿಬಿಡುವುದು ಇನ್ನೂ ಅಪಾಯಕಾರಿ. ಇಂಥ ಸಂದರ್ಭಗಳಲ್ಲಿ ಭೈರಪ್ಪನವರಂಥ ನಾಗರಿಕರು, ಸುಸಂಸ್ಕೃತರು, ಪಡಿತರು ತಮ್ಮ ಜವಾಬ್ದಾರಿ ನಿರ್ವಹಿಸಬೇಕಾದುದು? ಇತಿಹಾಸದ ವಾಸ್ತವಗಳನ್ನು ತಿಳಿಯಲು ನಮಗೆ ಭೈರಪ್ಪನವರ ಅವಶ್ಯಕತೆಯಿಲ್ಲ. ಈ ವಾಸ್ತವಗಳಿಂದ ಮನುಷ್ಯ ರೀತಿಗಳ ಸತ್ಯಗಳೇನು ಎಂದು ಒಳನೋಟಗಳ ಸಹಾಯದಿಂದ ಬೆಳಕು ಚೆಲ್ಲುವುದನ್ನು ನಾವು ನಿರೀಕ್ಷಿಸುವುದು. ಔರಂಗಜೇಬ, ಶಹಾಜಹಾನ್, ಟಿಪ್ಪು ಇವರುಗಳೆಲ್ಲರ ಕುರಿತು ಭೈರಪ್ಪನವರು ಹೇಳುವುದೆಲ್ಲ ವಾಸ್ತವಗಳೇ ಎಂದು ನಂಬೋಣ. ಆದರ ಭೈರಪ್ಪನವರೇ ಹೇಳುವ ಹಾಗೆ ಅವರುಗಳೆಲ್ಲ ಮತಾಂಧರು, ಅಜ್ಞರು, ದುರಾಭಿಮಾನಿಗಳು, ಅನಾಗರಿಕರು; ಎಂದಮೇಲೆ ಅವರ ಅಕೃತ್ಯಗಳಿಗೆ ಇಂದು ಪರಿಹಾರ ಬಯಸುವುದು ಹೇಗೆ ಅವರ ಮತಾಂಧತೆ, ಅನಾಗರಿಕತೆಗಳಿಗಿಂತ ಭಿನ್ನ ಎಂದು ತಿಳಿಯದಾಗಿದೆ.

ಮುಸಲ್ಮಾನರು ಒಟ್ಟು ಅಲ್ಪಸಂಖ್ಯಾತ ಮಂದಿ ಪ್ರತಿಕ್ಷಣ ತಮ್ಮ ನಿಷ್ಠೆಯನ್ನು ಸಾಬೀತುಗೊಳಿಸುತ್ತಿರಬೇಕು ತಮ್ಮ ದೇಶಪ್ರೇಮದ ಬಗ್ಗೆ; ಆದರೆ ಭೈರಪ್ಪನವರು ಮಾತ್ರ ಹಿಂದೂ ಮನಸ್ಥಿತಿಯ 'ಆವರಣ'ದಿಂದ ಮುಕ್ತವಾಗಿದೆ. ಎಂದೂ ಭಾರತೀಯನಾಗದೆ, ಮನುಷ್ಯನಾಗದೆ ಉಳಿದುಬಿಟ್ಟರೂ ಕೇಳುವವರಿರಬಾರದು, ಕೇಳುವವರು ಇರುವುದಿಲ್ಲ ಯಾಕೆಂದರೆ ಈ ಪುಣ್ಯಭೂಮಿ ಅವರ ಮತ್ತು ಅಂಥವರ ಪಿತ್ರಾರ್ಜಿತ ಸ್ವತ್ತು–ಅದಕ್ಕೆ.

ಭೈರಪ್ಪನವರು ಮುಸ್ಲಿಮರಿಗೆ ಹಾಗೆ ನೈತಿಕವಾಗಿ ಬೆಳೆಯುವ ಖಾವು ಕೊಡುತ್ತಿಲ್ಲ ಎಂದು ನೇರವಾಗಿ ಆಪಾದಿಸುತ್ತಾರೆ. ಹೊರಗಿನಿಂದ ದಾಳಿ ಮಾಡಿ ಇಲ್ಲಿ ಮಂದಿರಗಳನ್ನು ನಾಶ ಮಾಡಿದರೆನ್ನಲಾದ ಬಾಬರ, ಔರಂಗಜೇಬ, ಮತ್ತೆಲ್ಲರೂ ಈ ನೆಲಕ್ಕೆ ಹೊರಗಿನವರು. ಟಿಪ್ಪು ಈ ನೆಲದವೇ. ಆದರೂ ಭೈರಪ್ಪನವರ ನಿಲುವನ್ನು ಒಪ್ಪುವುದಾದರೆ ಅವನು ಕೂಡ 'ಮತಾಂತರವೇ ಮುಸ್ಲಿಂ ಧರ್ಮದ ಮೂಲ ಕರ್ತವ್ಯ' ಎಂದು ನಂಬಿದ ಕೋಮಿಗೆ ಸೇರಿದವನು. ಎಲ್ಲರೂ ನವಾಬರು, ಸುಲ್ತಾನರು; ತಮ್ಮ ನಿರ್ಧಾರಗಳನ್ನು ಜಾರಿಗೊಳಿಸಲು ಬೇಕಾದ ಜನ ಬಲ, ಧನ ಬಲ ಇದ್ದವರು. ಅವರು ಮಾಡಿದ ಮಂದಿರನಾಶಗಳು ನಮ್ಮ

ಪ್ರಶ್ನೆಯ ಮೇಲೆ ಅಚ್ಚೊತ್ತಿದ ಗಾಯವೆಂಬುದು ನಿಜವಾದರೂ ಅದರ ಕುರಿತು ಈಗ ನಾವು ಏನು ಮಾಡಹೊರಡುವುದೂ ಕೇವಲ ಕೀಳುಮಟ್ಟದ ಹಗೆ ಸಾಧನೆಯಷ್ಟೇ ಆಗುವುದರಲ್ಲಿ ಸಂದೇಹವಿಲ್ಲ ಎಂಬುದು ಅಷ್ಟೇ ನಿಜ. ಹೀಗೆ ಹಿಂದೆ ನಡೆದುಹೋದ ಈ ಭಯಾನಕ ಘಟನೆಗಳು ಭಯಾನಕ ಘಟನೆಗಳಷ್ಟೆ. ಇವೆಲ್ಲ ಐತಿಹಾಸಿಕ ವಾಸ್ತವಗಳು.

ಈ ಪುಸ್ತಕ ಓದಿದ ಮೇಲೆ ಯಾರಿಗಾದರೂ ಕುತೂಹಲಕ್ಕಾದರೂ ತಿಳಿಯಬೇಕೆಂದು ಅನ್ನಿಸುವ ಒಂದೆರಡು ವಿಷಯಗಳಿವೆ. ಭೈರಪ್ಪನವರು ಈಗ ಮುಸಲ್ಮಾನರಿಂದ ನಿರೀಕ್ಷಿಸುವದೇನನ್ನು? ಇಡೀ ಹಿಂದೂ ಸಮಾಜದ ಕ್ಷಮೆ ಕೇಳಬೇಕೆಂದೆ? ಹೀಗೆ ಕ್ಷಮೆ ಕೇಳಿಬಿಟ್ಟರೆ ಭೈರಪ್ಪನವರಿಗೆ ಮತ್ತು ಅವರ ಹಾಗೆ ಯೋಚಿಸುವ ಹಿಂದೂ ಸಮಾಜಕ್ಕೆ ಸಮಾಧಾನವಾಗಿ ನಾಳಿನಿಂದ ಸೌಹಾರ್ದದಿಂದ ಒಟ್ಟಿಗೆ ಬದುಕಲು ನಿರ್ಧರಿಸುತ್ತಾರೆಯೇ? 'ಮಥುರಾ ಕಾಶಿ ಬಾಕೀ ಹೈ' ಎಂದು ಕನಲುತ್ತಿರುವ ಬಾಬ್ರಿಮಸೀದಿ ಭಂಜಕರು ಇಷ್ಟರಿಂದಲೇ ತೃಪ್ತರಾಗಿ ಜಾತ್ಯಾತೀತ ರಾಷ್ಟ್ರದ ನಿರ್ಮಾಣಕ್ಕೆ ಕಂಕಣಬದ್ಧರಾಗಿಬಿಡುತ್ತಾರೆಂದು ನಂಬಬೇಕೆ? ಅಥವಾ ಮಸೀದಿಗಳನ್ನು ಪಲ್ಲಟಗೊಳಿಸಿ ದೇವಾಲಯಗಳನ್ನು ನಿರ್ಮಿಸುವುದಕ್ಕೆ ಮುಸ್ಲಿಂ ಸಮುದಾಯ ಒಪ್ಪಿಕೊಂಡುಬಿಟ್ಟರೆ ಭೈರಪ್ಪನವರಿಗೆ ನ್ಯಾಯ ದೊರಕಿದಂತಾಗುತ್ತದೆಯೇ? ಈ ದೇಶದಲ್ಲಿ ಅಲ್ಪಸಂಖ್ಯಾತರು ಎಂದಿಗೂ ಎರಡನೇ ದರ್ಜೆ ನಾಗರಿಕರಾಗಿಯೇ ಉಳಿಯಬೇಕೆಂದು ಬಯಸುವುದಿಲ್ಲ ಎಂಬುದಕ್ಕೆ ಖಾತ್ರಿಯೇನು? 'ಅವರು-ನಾವು ಎಂದಾದರೊಂದು ದಿನ ಅಳಿಸಿಹೋಗಬೇಕೆಂಬ ಕಿಂಚಿತ್ತಾದರೂ ಆಶಯ ಭೈರಪ್ಪನವರಿಗೆ ಇದೆಯೆ? ಅವರ ಇಡೀ ಕೃತಿಯಲ್ಲಿ ಈ ಆಶಾಭಾವ ಮೂಡಿಸುವಂಥ ಒಂದು ಲವಲೇಶ ಅಂಶವೂ ಇಲ್ಲ. ಅವರು ಓದಿಕೊಂಡಿರುವ 'ಸಂಶೋಧಕರ' ಪುಸ್ತಕಗಳ ಪ್ರಕಾರ ಮೂವತ್ತು ಸಾವಿರ ಭಿನ್ನ ಮಂದಿರಗಳಿವೆ. ಅವುಗಳಲ್ಲಿ ನ್ಯಾಯ ದೊರಕಿಸಿಕೊಡುವ ಉಗ್ರ ಹೋರಾಟದಲ್ಲಿ ಪ್ರಜಾಪ್ರಭುತ್ವ, ಜಾತ್ಯಾತೀತ, ಸಹಿಷ್ಣುತೆ ಎಂಬಲ್ಲ ಮೌಲ್ಯಗಳು ಔರಂಗಜೇಬ ಕೆಡವಿದ ಮಂದಿರಗಳಂತೆ, ಭೈರಪ್ಪನವರ ಪಂಥ ಸೇರಿದವರು ಭಗ್ನಗೊಳಿಸಿದ ಬಾಬ್ರಿ ಮಸೀದಿಯಂತೆ ನೆಲಸಮವಾಗಿ, ಧೂಳಾಗಿ ಮಣ್ಣಾಗಿ ಹೋದರೆ ಅವರಿಗೇನು ಚಿಂತೆ? ಹಾಳಾದುದನ್ನು ಹಾಳಾಗಿ ಹೋಗುತ್ತದೆ.

ಮತ್ತೊಂದು ಪ್ರಶ್ನೆಯನ್ನು ಕುತೂಹಲಕ್ಕಾದರೂ ಕೇಳಲೇಬೇಕು. ಭೈರಪ್ಪನವರು ಬಹಳಷ್ಟು ಹೆಮ್ಮೆಯಿಂದ ಮೊಳಗಿಸುತ್ತಿರು ಸ್ವಾತಂತ್ರ್ಯಾನಂತರದ ಸಾಮಾಜಿಕ ನ್ಯಾಯ ಪರಿಕಲ್ಪನೆಯ ಅನುಷ್ಠಾನದ ಬಗೆಗೆ ದಲಿತ ಲೇಖಕನೊಬ್ಬ ಒಂದು ಕೃತಿಯನ್ನು ರಚಿಸಿ ಭೈರಪ್ಪನವರ ಮುಂದೆ ಹಿಡಿದರೆ ಹೇಗೆ? ನೆಲಸಮವಾಯಿತೆಂದು ಅವರು ಹೇಳುವ ಮೂವತ್ತು ಸಾವಿರ ಭಗ್ನ ದೇವಾಲಯಗಳು ಎಬ್ಬಿಸಿದ ಧೂಳಿನಲ್ಲಿಯೇ ಉಸಿರು ಕಟ್ಟಿಕೊಂಡು ಸಂಭ್ರಮಿಸುತ್ತಿರುವ ಭೈರಪ್ಪನವರಿಗೆ ಸ್ವಾತಂತ್ರ್ಯ ಬಂದನಂತರ 'ಏಕಂ ಸತ್ ವಿಪ್ರಾ ಬಹುಧಾವದಂತಿ' ಎಂಬ ತತ್ವವು ಈ ನೆಲದಲ್ಲಿ ರಾತ್ರೋರಾತ್ರಿ ಬೇರುಬಿಟ್ಟು, ಅರವತ್ತು ವರ್ಷಗಳಲ್ಲಿ ಬೃಹತ್ ವೃಕ್ಷವಾಗಿ ಬೆಳೆದು ಇಡೀ ಭಾರತೀಯ ಸಮಾಜ ಅದರ ತಂಪಿನಲ್ಲಿ ಸಂತೃಪ್ತರಾಗಿ ಬದುಕುತ್ತಿದೆ-ಎಂದು ಅನ್ನಿಸುತ್ತಿದ್ದರೆ ಆಶ್ಚರ್ಯವೇನು? ಸುತ್ತಲ ಜಗತ್ತು

ಇಷ್ಟು ಕುರುಡಾಗಲು ಸಾಧ್ಯವೇ? ತಮ್ಮದೇ ರೀತಿಯ ಸಿದ್ಧಾಂತಗಳಲ್ಲಿ ನಂಬಿಕೆಯಿರುವ ಕೋಮುವಾದಿ ಪಕ್ಷಗಳು ದಲಿತರನ್ನು ಇಂದಿಗೂ ಹೇಗೆ ನಡೆಸಿಕೊಳ್ಳುತ್ತಿದ್ದಾರ ಗೊತ್ತಿಲ್ಲವೇನು? ಈಗಲೂ ಅವರನ್ನು ಮಾನಸಿಕವಾಗಿ ಅಸ್ಪೃಶ್ಯರೆಂದೇ ಭಾವಿಸಿ ಅವರನ್ನು ನಿತ್ಯ ನರಕದಲ್ಲಿಯೇ ಇರಿಸಿಲ್ಲವೇನು? ಭೈರಪ್ಪನವರು ಬಹುಶಃ ಈ ವರ್ತಮಾನದ ಪರಿಸ್ಥಿತಿ ತಿಳಿದಿಲ್ಲವೇನು? ಎಂದು ಎನ್ನಿಸದೇ ಇರದು.

ಸತ್ಯ ಎಂಬುದು ತನ್ನ ನಿಗೂಢಗಳನ್ನು ಬಿಟ್ಟುಕೊಡದೇ ಉಳಿದುಬಿಡುವ ಆಕರ್ಷಣೆ. ಆದರೇ ಅದೇ ಸತ್ಯ ಭೈರಪ್ಪನವರಿಗೆ ಅಚಲವಾದ, ಹೆಬ್ಬಂಡೆ ರೀತಿಯ ಸಿದ್ಧಾಂತ ಇದ್ದ ಹಾಗೆ ರಾಯಘಡದ ರಾಜಕುಮಾರನಂತೆ ತನ್ನೆದುರು ಝಳಪಿಸಿದ ಕತ್ತಿಯೆ ದರ್ಶನಕ್ಕೆ ನಡುಗಿ ಸ್ವಧರ್ಮ ಕೈಬಿಟ್ಟು, ಮತಾಂತರಗೊಂಡು, ಸಲಿಂಗಕಾಮದ ಬಲಿಪಶುವಾಗಿ, ಪುರುಷತ್ವವನ್ನು ನಾಶಪಡಿಸಿಕೊಂಡು ನಪುಂಸಕನಾಗಿ, ಜನಾನಾದಲ್ಲಿ ಗುಲಾಮನಾಗುವಷ್ಟು ಸುಲಭವಾಗಿ ತಮ್ಮ ಓದುಗರೂ ತಮ್ಮ 'ಕಾದಂಬರಿ' ಓದಿ ಸ್ವಂತಿಕೆ, ವಿಚಾರ, ಜೀವನ ದೃಷ್ಟಿ, ಸಮಷ್ಟಿಕ್ಷೇಮ ಚಿಂತನೆ ಎಲ್ಲವನ್ನು ಕೈಬಿಟ್ಟು ತಾವು ಆಡಿಸುವ 'ಸತ್ಯ'ವೆಂಬ ಗೊಂಬೆಯಾಟಕ್ಕೆ ತಾಳಹಾಕಿ ಕುಣಿಯುತ್ತಾರೆಂದು ತಿಳಿಯುವುದು ಭೈರಪ್ಪನವರ ಭ್ರಮೆ.

ಭೈರಪ್ಪನವರಿಗೆ ಭಾರತವು ಸಂಸ್ಕೃತಿ ಎಂಬುದು ಎಷ್ಟು ರೀತಿಗಳಲ್ಲಿ, ಎಷ್ಟು ವೈವಿಧ್ಯಮಯವಾಗಿ ಬೆಳೆದಿದೆ ಎಂಬುದು ಗುರುತಿಸಲಿಕ್ಕಾಗದಷ್ಟು ಅಜ್ಞಾನ ಪ್ರದರ್ಶಿಸಿದ್ದಾರೆ. ಭಾರತೀಯ ಸಂಸ್ಕೃತಿ ಈ ನೆಲದಲ್ಲಿ ಹುಟ್ಟಿದ್ದಷ್ಟೇ ಅಲ್ಲ, ಅಷ್ಟೇ ಮಟ್ಟಿಗೆ ಹತ್ತು ದಿಕ್ಕುಗಳಿಂದ ಹರಿದುಬಂದ ವಾಹಿನಿಗಳಿಂದ ಪೋಷಿತವಾಗಿ ಶ್ರೀಮಂತವಾಗಿದೆ. ಹೀಗೆ ಹರಿದ ವಾಹಿನಿಗಳಲ್ಲಿ ಇಸ್ಲಾಂ ಸಂಸ್ಕೃತಿ ಕೂಡಾ ಪ್ರಧಾನವಾದದ್ದು. ಇಸ್ಲಾಂನಿಂದ ನಮಗೆ ದಕ್ಕಿದ ಸಂಗೀತ, ಶಿಲ್ಪ, ಸಾಹಿತ್ಯ ಮತ್ತು ತತ್ವಶಾಸ್ತ್ರ, ಸೂಫಿ ಧರ್ಮ ಇವು ಯಾವುವೂ ಕನಿಷ್ಠ ದರ್ಜೆಯವಲ್ಲ. ಇಂದು ನಮ್ಮ ಸಂಸ್ಕೃತಿಯನ್ನೂ, ಅದರ ಆಯಾಮಗಳನ್ನೂ ಲಕ್ಷಣಗಳನ್ನೂ ವೈವಿಧ್ಯವನ್ನೂ ಅನುಭವಕ್ಕೆ ತಂದುಕೊಳ್ಳುವುದು ಸತ್ಯವನ್ನು ಅನ್ವೇಷಿಸ ಹೊರಡುವಷ್ಟೇ ಸವಾಲಿನದು. ಆದರೆ ಭೈರಪ್ಪನವರಿಗೆ ನಾಲ್ಕು ಗೋಡೆಗಳ ಮಧ್ಯದಲ್ಲಿರುವುದೇ ಭಾರತೀಯ ಸಂಸ್ಕೃತಿ. ಹೀಗಾಗಿಯೇ 'ಆವರಣ'ದಲ್ಲಿ ನಾಯಕಿ ಲಕ್ಷ್ಮಿಯ ತಂದೆ ಸತ್ಯವನ್ನು ಅನ್ವೇಷಿಸುತ್ತಿರುವವರೆಗೆ ಜೀವ ಪ್ರೇಮ ಸಾಧ್ಯವಾಗಿರುವವರೆಗೆ ಗಾಂಧೀಜಿಯವರ ಭಾವಚಿತ್ರ ಅವರ ಕೋಣೆಯನ್ನು ಅಲಂಕರಿಸುತ್ತದೆ. ಪುಸ್ತಕಗಳನ್ನು ತಂದು ವ್ಯಾಸಂಗ ಮಾಡಿ ಭೂತದ ಇತಿಹಾಸದ ವಾಸ್ತವಗಳೇ ಪರಮ ಸತ್ಯಗಳೆಂದು ತೀರ್ಮಾನಿಸಿದ ಗಳಿಗೆಗೇ ಗಾಂಧೀಜಿಯವರ ಭಾವಚಿತ್ರ ಮಾಯವಾಗುತ್ತದೆ. ಭೈರಪ್ಪನವರ ಆಲೋಚನೆಗಳಲ್ಲಿ ಒಬ್ಬ ಉಗ್ರವಾದಿ ಸೃಷ್ಟಿಮಾಡಲು ಮಾತ್ರ ಸಾಧ್ಯ ಎಂಬುದು ಸ್ಪಷ್ಟವಾಗಿ ಅರ್ಥವಾಗುತ್ತದೆ.

ಹೀಗಾಗಿ ಈ 'ಆವರಣ'ದಲ್ಲಿ ಕಲಾಕೃತಿ, ಇತಿಹಾಸ, ಸಂಶೋಧನೆ, ಈ ಯಾವ ವರ್ಗಕ್ಕೊ ಸೇರಿಸುವುದು ಕಷ್ಟವೇ. ೨೧ ಶತಮಾನದ ಲಕ್ಷ್ಮಿ-(ರಜಿಯಾ) ಹಾಗೂ ಔರಂಗಜೇಬನ ಸಮಕಾಲೀನ ಧರ್ಮಾಂಧ ಮುಸಲ್ಮಾನ ಧುರೀಣ ಹಾಜಿ ಹಮ್‌ದುಲ್

ಹ್ ಕ್ ಎರಡೂ ಪಾತ್ರಗಳನ್ನೂ ಜೊತೆಯಾಗಿ ಬೆಳೆಯುಲು ಪ್ರಯತ್ನಿಸಿದ್ದಾರೆ. ಒಂದು ಕಲಾಕೃತಿಗೆ ಸಾಧಾರಣವಾಗಿ ಆರಂಭ, ಬೆಳವಣಿಗೆ, ಕ್ಲೈಮಾಕ್ಸ್ ಮತ್ತು ಅಂತ್ಯ ಎಂಬ ಲಕ್ಷಣಗಳಿರುತ್ತವೆ. 'ಆವರಣ' ಕಲಾಕೃತಿ ಅಲ್ಲವಾದ್ದರಿಂದ ಈ ಯಾವ ಲಕ್ಷಣಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಸಮಾಜದಲ್ಲಿ ತಾವು ಅಲ್ಲೋಲಕಲ್ಲೋಲ ಉಂಟುಮಾಡಿ ಬಿಟ್ಟಿದ್ದಾನೆಂಬ ಭಯಂಕರ ಭ್ರಮೆಯ ಸುಳಿಗೆ ಸಿಕ್ಕಿಬಿದ್ದಿರುವುದೂ ಸ್ಪಷ್ಟವಾಗಿ ಕಾಣುತ್ತದೆ. ಹೀಗಾಗಿ ಭೈರಪ್ಪನವರ ಆಲೋಚನೆಗಳೆಲ್ಲವೂ ತಲೆಕೆಳಗಾಗಿವೆ ಎನ್ನಿಸದೇ ಇರುವುದಿಲ್ಲ.

ಈ ಅರವತ್ತು ವರ್ಷಗಳಲ್ಲಿ ನಾವು ಬುದ್ಧಿವಂತರು, ಸುಸಂಸ್ಕೃತರು ಎಂದುಕೊಂಡವರು ಸಾಮಾಜಿಕವಾಗಿ, ರಾಜಕೀಯವಾಗಿ ತಟಸ್ಥ ಭಾವ, ತಿರಸ್ಕಾರ ಭಾವಗಳು ತಾಳಿದ್ದರಿಂದಲೇ ಇಂದು ನಮ್ಮ ಪ್ರಜಾಪ್ರಭುತ್ವ, ದೇಶದ ಭವಿಷ್ಯ ಒಂದು ಕಡೆ ಕೋಮುವಾದ ಇನ್ನೊಂದೆಡೆ ಹಿಂಸಾವಾದದ ತೆಕ್ಕೆಗೆ ಬಿದ್ದು ನರಳುತ್ತಿರುವುದು.

**ಕೊನೆ ಟಿಪ್ಪಣಿಗಳು**

೧. ಜಿ. ಕೆ. ಗೋವಿಂದರಾವ್ 'ಆವರಣ' ಎಂಬ ವಿ-ಕೃತಿ. ಸ್ವಯಂ ನಿರ್ಮಿತ 'ಆವರಣ'ದೊಳಗೆ ಜೀವಾವಧಿ ಬಂಧಿ ಭೈರಪ್ಪ, ೨೦೦೭, ಸಂ.: ಗೌರಿ ಲಂಕೇಶ, ಲಂಕೇಶ ಪ್ರಕಾಶನ, ಬೆಂಗಳೂರು. ಪುಟ ೭೬.
೨. ಅದೇ, ಪುಟ ೮೧.

## ಅಧ್ಯಾಯ ೪

## ಐತಿಹಾಸಿಕ ಘಟನೆಗಳು ನೆನಪಿಸುವ ಪ್ರಯತ್ನ

ಭೈರಪ್ಪನವರು 'ಆವರಣ'ದಲ್ಲಿ ಮಾಡಿದ್ದು ಚರಿತ್ರೆಯ ಪಾಠ ಎನ್ನಬೇಕೋ ಅಥವಾ ಅವರ ಸೃಜನಶೀಲತೆ ಎನ್ನಬೇಕೋ ಒಂದೂ ತಿಳಿಯದಾಗಿದೆ. ಎಂದೋ ಸಂಭವಿಸಿದ ಚಾರಿತ್ರಿಕ ಘಟನೆಗಳನ್ನೋ, ಸಂಗತಿಗಳನ್ನೋ ಮತ್ತೆ ಮತ್ತೆ ಕೆದಕಿ ಮತೀಯ ವಾದದ ಬೆಂಕಿಗೆ ತುಪ್ಪ ಸುರಿದಿದ್ದಾರೆ. ಇಂಥವೆಲ್ಲ ನಡೆದಿದ್ದವು ಎನ್ನುವುದನ್ನು ಮತ್ತೆ ಮತ್ತೆ ಜನರಿಗೆ ನೆನಪು ಮಾಡಿ ಸತ್ತುಹೋಗಿರುವ ಘಟನೆಗಳಿಗೆ ಜೀವ ತುಂಬಲು ಪ್ರಯತ್ನಿಸಿದ್ದಾರೆ. ಇವರು ಕೃತಿಯೊಂದನ್ನು ರಚಿಸಬೇಕಾದಾಗ ಹಿಂದಿನ ಘಟನೆಗಳನ್ನೆ ಆಧಾರವಾಗಿಟ್ಟುಕೊಂಡೇ ಕೃತಿಯನ್ನು ರಚಿಸುತ್ತಾರೇನೋ ಎಂಬ ಅನುಮಾನ ಅವರ ಕೃತಿಯನ್ನು ಓದಿದಾಗ ಅನ್ನಿಸದೇ ಇರಲಿಕ್ಕಿಲ್ಲ. ಆದರೆ ಕೆಲವು ಸಲ ಇವರೆಲ್ಲ ತಮಗಿರುವ ಸ್ವಾತಂತ್ರ್ಯವನ್ನು ಬಳಸಿಕೊಂಡು ಹಳೆಯದರ ಪೈಕಿ ಕೆಲವನ್ನು ಮಾತ್ರ ಪ್ರತ್ಯೇಕವಾಗಿಟ್ಟು ಅವನ್ನು ಹೆಕ್ಕುತ್ತ ಹೊರಟಾಗ ಸಮಾಜದಲ್ಲಿ ಈಗಾಗಲೇ ದುರ್ಬಲವಾಗುತ್ತಿರುವ ಕೆಲವು ಮೌಲ್ಯಗಳಲ್ಲಿ ಮತ್ತೆಲ್ಲಿ ಬಿರುಕುಗಳು ಕಾಣಿಸಿಕೊಳ್ಳುತ್ತವೆಯೋ, ಸಮಗ್ರತೆಗೆಲ್ಲಿ ಧಕ್ಕೆಯುಂಟಾಗುತ್ತದೆಐ ಎಂದು ದಿಗಿಲಾಗುತ್ತದೆ. ಇವರ ಕೃತಿಗಳಿಂದ ನಿರ್ದಿಷ್ಟ ವರ್ಗವೊಂದಕ್ಕೆ ಸಂತೋಷ ಹಾಗೂ ಸಮಾಧಾನ ಸಿಗಬಹುದಾದರೂ ಸಮಾಜದಲ್ಲಿ ಸಾಧ್ಯವಾದಷ್ಟೂ ಸಾಮರಸ್ಯ ಏರ್ಪಟ್ಟರೆ ಮಾತ್ರ ಮುಂದಿನ ಬದುಕು ಸಾಧ್ಯ ಎಂದು ನಂಬಿಕೊಂಡಿರುವವರ ಮನಸ್ಸಿಗೆ ಮಾತ್ರ ನೋವಾಗುತ್ತದೆ, ಮುಜುಗರವಾಗುತ್ತದೆ.

ಸಾಮಾನ್ಯರ ದೃಷ್ಟಿಯಿಂದ 'ಆವರಣ'ವನ್ನು ಓದಲಾರಂಭಿಸಿದವರಿಗೆ ಇದು ತೀರಾ ನಿರಾಸೆಯನ್ನುಂಟು ಮಾಡಿರಬಹುದು. ಕಾರಣ ಇದು ಯಾವೊಂದು ಕಥೆಯನ್ನೂ ಸುಸೂತ್ರವಾಗಿ ಹೇಳದೆ, ಆಂತರಿಕ ಘಟನೆಗಳಿಗೆ ಮಾತ್ರ ಕಟ್ಟಿಕೊಂಡು ಸಮಾಜವೊಂದನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿ ಅವುಗಳಲ್ಲಿನ ಒಪ್ಪು ತಪ್ಪುಗಳನ್ನು ತೋರಿಸುವುದನ್ನೇ ಉದ್ದೇಶವನ್ನಾಗಿಟ್ಟುಕೊಂಡಿರುವುದು. ಭೈರಪ್ಪನವರಂಥ ಪಳಗಿದ ಕಾದಂಬರಿಕಾರರಿಗೆ ಪಾತ್ರ ಸೃಷ್ಟಿಯೆನ್ನುವುದು ಪ್ರಾಯಶಃ ಲೀಲಾಜಾಲವಾದ ಕೆಲಸ. ಸನ್ನಿವೇಶಗಳನ್ನು ಅದ್ಭುತವಾಗಿ ಹೆಣೆದು ಗಾತ್ರದಲ್ಲೂ ಬೃಹತ್ತಾದ ಕಾದಂಬರಿಗಳನ್ನು ಪ್ರಕಟಿಸಿರುವ ಲೇಖಕರಿವರು.

ಆದರೆ ಇಲ್ಲಿ ಪ್ರಾಯಶಃ ಇವರಿಗೆ 'ಆವರಣ'ದ ಮೂಲಕ ಸಮಾಜದ ಒಂದು ವರ್ಗದ ಬಗ್ಗೆ ತಮ್ಮನ್ನು ಪೀಡಿಸಿರುವ ಭಾವನೆಗಳನ್ನು ಹೊರಹಾಕುವುದೇ ಅವರ ಮುಖ್ಯ ಉದ್ದೇಶವಾಗಿರಬೇಕು. ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವ ತೀವ್ರ ತವಕ. ಅದ್ದರಿಂದಲೇ ಇಲ್ಲಿ ನಮಗೆ ದೊರೆಯುವ ಕೆಲವೇ ಪಾತ್ರಗಳಲ್ಲೂ ನೈಜತೆ ಕಾಣುವುದಿಲ್ಲ. ಸುತ್ತ ಮುತ್ತಲಿನ ಹಲವಾರು ಮಗ್ಗುಲುಗಳನ್ನು ತೋರಿಸಬಲ್ಲಂಥ ವಿಸ್ತಾರವಾದ 'ಆವರಣ'ವೊಂದು ಸೃಷ್ಟಿಯಾಗಿದೆ ಎನ್ನಿಸುವುದಿಲ್ಲ.

ಇಡೀ ಕಾದಂಬರಿ ಸಂಶೋಧನೆಯ ಒಂದೇ ನಿಲುವು, ಒಂದೇ ದೃಷ್ಟಿಕೋನ. ಒಂದೇ ರೀತಿಯಾದ ಘಟನೆಗಳು. ಒಂದೇ ರೀತಿಯಾದ ಅಭಿಪ್ರಾಯಗಳನ್ನು ನೀಡುವಂಥ ಪುಸ್ತಕಗಳ ಪಟ್ಟಿಯನ್ನೊಳಗೊಂಡ ಅಭಿಪ್ರಾಯಗಳಿವೆ. ಕೆಲವು ಕಡೆಗಳಲ್ಲಿ ಅನವಶ್ಯಕ ವಿವರಗಳಿವೆ. ಕಾದಂಬರಿಕಾರ ಭೈರಪ್ಪ 'ಆವರಣ'ದಲ್ಲಿ ವಿಷಯವನ್ನು ಪ್ರತಿಪಾದಿಸುವುದು ಬೇರೆ ಬೇರೆ ಧರ್ಮಗಳಿಗೆ ಸೇರಿದ ಗಂಡ ಹೆಂಡತಿಯ ಪಾತ್ರಗಳ ಮೂಲಕ, ಶ್ರದ್ಧೆ ನಂಬಿಕೆಗಳ ಮಧ್ಯದಲ್ಲಿನ ಭಿನ್ನಾಭಿಪ್ರಾಯಗಳಿಂದಾಗಿ ಇವರಿಬ್ಬರ ಮಧ್ಯ ಕಂದರಗಳು, ಗುಮಾನಿಗಳು, ವೈಮನಸ್ಸುಗಳು ಎನ್ನುವುದನ್ನು ಅತೀ ಚಾಣಕ್ಷತನದಿಂದ ತೋರಿಸಿದ್ದಾರೆ. ಆದರೆ ಭೈರಪ್ಪನವರ ಪ್ರತಿಪಾದನೆ ಏನಿದ್ದರೂ, ಅವರು ಈ ಮೂಲಕ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ಪ್ರಯತ್ನಿಸಿದ್ದರೂ, ಇಲ್ಲಿ ನೆನಪಿಟ್ಟುಕೊಳ್ಳಲೇಬೇಕಾದದ್ದು ಅನೇಕ ಸಂದರ್ಭಗಳಲ್ಲಿ ಕ್ರಿಯಾಶೀಲರ ದಾಂಪತ್ಯದಲ್ಲಿ ಮಾತ್ರವಲ್ಲ, ಸಾಮಾನ್ಯರ ದಾಂಪತ್ಯದ ಮಧ್ಯೆಯೂ ಈ ಕಾದಂಬರಿಯಲ್ಲಿ ನಮೂದಿಸಿರುವ ಕಾರಣಗಳಲ್ಲದೆ, ಮತ್ಯಾವುದೋ ನವಗಳಿಂದಾಗಿ ಅಭದ್ರತೆಯುಂಟಾಗಬಹುದು ಎನ್ನುವುದು. ಇದು ಲೈಂಗಿಕ ಅತೃಪ್ತಿಗೆ ಸಂಬಂಧಿಸಿರಬಹುದು, ಈರ್ಷೆಯಿಂದಾಗಿರಬಹುದು. ಗಂಡನಿಗೆ ಹೆಂಡತಿ, ಹೆಂಡತಿಗೆ ಗಂಡ ತನಗೆ ತಕ್ಕವನಲ್ಲ ಎನ್ನಿಸಿದ ಹಿನ್ನೆಲೆಯಲ್ಲಿ ಎದ್ದ ಅಸಮಾಧಾನವಿರಬಹುದು; ವಿವಾಹೇತರ ಸಂಬಂಧಗಳಿಂದಾಗಿ ಸೂತ್ರ ಸಡಿಲಗೊಂಡಿರಬಹುದು. ವರ್ಷಗಟ್ಟಲೆ ಸಂಸಾರ ಮಾಡಿದ್ದರೂ ಅವರ ಸಂಬಂಧ ಕ್ಷುಲ್ಲಕ ಕಾರಣಗಳಿಂದಾಗಿ ಹಳಸಿಕೊಳ್ಳುವುದನ್ನು ನೋಡಿದ್ದೇವೆ. ಭಯ ಭಕ್ತಿ ನಂಬಿಕೆಗಳು ಆರಾಧನೆ ಶ್ರದ್ಧೆಗಳು ಇವರಿಬ್ಬರ ಮಧ್ಯ ಏಕರೀತಿಯವಾಗಿದ್ದರೂ ಇವರಿಬ್ಬರ ಜೀವನದ ಹೆಣಿಗೆ ಎಷ್ಟೋ ಸಂದರ್ಭಗಳಲ್ಲಿ ಅವರಿಗೆ ಗೊತ್ತಾಗದಂತೆಯೇ ಯಾವುದೋ ಮೂಲೆಯಲ್ಲಿ ಜಾಳಾಗಿ ಬಿಟ್ಟಿರುತ್ತದೆ. ಹೆಣಿಗೆ ಕಿತ್ತುಹೋದಾಗ ಮಾತ್ರ ಆಗಿರುವ ಏರುಪೇರುಗಳು ಇವರ ಗಮನಕ್ಕೆ ಬಂದಿರುತ್ತವೆ. ಯಾವುದೇ ಕೃತಿಯಲ್ಲಿ ನಿರ್ದಿಷ್ಟ ಆಚಾರ ಪದ್ಧತಿಗಳನ್ನು ಎಳೆದು ತಂದು, ದೇವರು ದಿಂಡರುಗಳನ್ನು ಹೆಸರಿಸಿ ಆ ಕಾರಣಗಳಿಗಾಗಿ ದಾಂಪತ್ಯವೊಂದು ಕುಸಿಯಬಲ್ಲದು ಎನ್ನುವುದನ್ನು ಮನದಟ್ಟು ಮಾಡಿಸಲು ಪ್ರಯತ್ನಿಸಿದರೆ ತರುಣ ಜನಾಂಗಕ್ಕೆ ಜೀವನ ಸಂಗಾತಿಗಳನ್ನು ಹುಡುಕಿಕೊಳ್ಳಬಲ್ಲ ಆಯಾಮ ಸಂಕುಚಿತವಾಗುತ್ತಿದೆಯಲ್ಲ ಎಂಬ ಭಯ ಹುಟ್ಟಬಹುದು.

ಗಂಡ ಹೆಂಡತಿಯ ಮಧ್ಯ ಪರಸ್ಪರ ಗೌರವವಿದ್ದಾಗ, ಸಂಸಾರದಲ್ಲಿ ಸಮತೋಲನ ಏರ್ಪಟ್ಟಾಗ, ಉಡುಪು, ಊಟ, ಪೂಜೆ ಪುನಸ್ಕಾರ, ಹಬ್ಬ ಉತ್ಸವ ಇವೆಲ್ಲಾ

ಬದುಕಿಗಿಂತಲೂ ದೊಡ್ಡವು ಎನಿಸಿಕೊಳ್ಳುವುದೇ ಇಲ್ಲ. ನಂಬಿಕೆ, ವಿಶ್ವಾಸ, ಸ್ವಭಾವ, ಅಭಿರುಚಿ ಇವು ಸಹಜವೆಂಬಂತೆ ಸಂಸಾರದಲ್ಲಿ ಅಳವಡಿಕೆಗೊಂಡಾಗ ದಾಂಪತ್ಯದಲ್ಲಿ ಸಾಮರಸ್ಯವೆನ್ನುವುದು ಎಂದೂ ಮರೀಚಿಕೆಯಾಗಿ ಉಳಿಯುವುದೇ ಇಲ್ಲ.

ಜೀವನದಲ್ಲಿ ನಾವು ಅನೇಕ ಮಾಯದ ಗಾಯಗಳನ್ನು ದಕ್ಕಿಸಿಕೊಂಡು ಜೀವನವನ್ನು ನಾವು ನಂಬಿದ್ದೇವೆ, ನಾವು ಕಂಡಂಥ ವ್ಯಕ್ತಿಗಳು ಮತ್ತು ನಡೆದುಹೋದ ಘಟನೆಗಳ ಆಧಾರದ ಮೇಲೆ ಸರ್ವಸಮ್ಮತವಾದ ಪಾತ್ರಗಳನ್ನು ಸೃಷ್ಟಿಸುತ್ತೇವೆ ಎಂದು ಸೃಜನ ಶೀಲರಷ್ಟೇ ಭಾವಿಸಿದರೂ, ಅವರ ಗೋಚರಿಕೆಯನ್ನೂ ಮೀರಿದ ವಾಸ್ತವತೆ ಎಲ್ಲೋ ಇಣುಕಿಹಾಕುತ್ತಲೇ ಇರುತ್ತದೆ. ಜೀವನವೆನ್ನುವುದು ಹೇಗೆ ಸೋಜಿಗವೋ ಮನುಷ್ಯ ಸ್ವಭಾವವೂ ಹಾಗೇ ವಿಸ್ಮಯಕಾರಿ. ನಮ್ಮ ನಮ್ಮ ಕುಟುಂಬಗಳನ್ನೇ ಉದಾಹರಣೆಯನ್ನಾಗಿ ತೆಗೆದುಕೊಂಡರೂ ಅಲ್ಲಿ ಸ್ನೇಹ, ತ್ಯಾಗ, ಕರುಣೆ, ಇಂಥ ಸದ್ಗುಣಗಳನ್ನು ಧಾರಾಳವಾಗಿ ಮತ್ತೊಬ್ಬರಿಗೆ ನೀಡಬಲ್ಲಂಥವರನ್ನು ನಾವು ನೋಡಿರುವಂತೆಯೇ ಕ್ರೌರ್ಯ, ದಬ್ಬಾಳಿಕೆ, ಅಸಂತುಷ್ಟಿ ಇಂಥ ಸಂಕುಚಿತ ಬುದ್ಧಿಯನ್ನು ಪೋಷಿಸಿಕೊಂಡು ಬಂದಿರುವಂಥವರನ್ನು ಕಾಣುತ್ತೇವೆ.

ಒಂದು ಸಂಸಾರದಲ್ಲಿ ಒಳ್ಳೆಯವರೆ ತುಂಬಿಕೊಂಡಿರುತ್ತಾರ, ಮತ್ತೊಂದರಲ್ಲಿ ಕ್ರೂರಿಗಳು ಮಾತ್ರ ಇದ್ದಾರೆ ಎಂದು ನಿರ್ಣಯಿಸುವುದರಲ್ಲಿ ಯಾವ ನ್ಯಾಯವಿದೆ? ಪ್ರತಿ ಮನೆಯ ಪೂರ್ವವೃತ್ತಾವಂತನ್ನು ಗಮನಿಸಿದಾಗ ಅದರಲ್ಲಿನ ಆಗುಹೋಗುಗಳಲ್ಲಿ ಕೆಲವು ಗಾಬರಿ ಹುಟ್ಟಿಸುವಂತೆಯೆ ಉಳಿದ ಕೆಲವು ಸಂತೋಷವನ್ನು ತರುತ್ತವೆ. ಸಹಸ್ರಾರು ಸಂಸಾರಗಳನ್ನೊಳಗೊಂಡಿರುವ ದೇಶದ ಪರಿಸ್ಥಿತಿಯೂ ಇಷ್ಟೆ. ಸಂಸಾರವೊಂದರಲ್ಲಿನ ಎಲ್ಲ ಹಂತಗಳಲ್ಲೂ ನಾವು ಹೇಗೆ ಒಳಿತನ್ನು ಅಥವಾ ಕೆಡುಕನ್ನು ಮಾತ್ರ ಕಾಣುವುದಿಲ್ಲವೋ ಹಾಗೆಯೇ ದೇಶವೊಂದರ ಇತಿಹಾಸದಲ್ಲೂ ಹಿತಕರವಾದ ಸಂಗತಿಗಳಂತೆಯೇ ಅಹಿತಕರ ಸಂಗತಿಗಳೂ ಇರುತ್ತವೆ.

ಘಟನೆಗಳನ್ನು ದಾಖಲಿಸುವುದು ಇತಿಹಾಸದ ಕೆಲಸ. ಆದರೆ ತುಂಬಾ ಸಮಾಧಾನವುಂಟು ಮಾಡುವ ಸಂಗತಿಯೆಂದರೆ ಈ ಇತಿಹಾಸವೆಂದೂ ತನ್ನ ಗರ್ಭದಲ್ಲಡಗಿರುವ ದ್ವೇಷ, ಅಸೂಯೆಗಳನ್ನು, ಮದ ಮಾತ್ಸರ್ಯಗಳನ್ನು ಪರಂಪರೆಯನ್ನಾಗಿ ಮುಂದುವರಿಸಿಕೊಂಡು ಹೋಗಬೇಕು ಎಂಬ ಆದೇಶ ನೀಡುವುದಿಲ್ಲ. ಆದರೆ ಭೈರಪ್ಪನವರು ಅದನ್ನೇ ಮುಂದುವರೆಸಿಕೊಂಡು ಹೊರಟಿದ್ದಾರೆ. ಅದು ಯಾವ ಪುರುಷಾರ್ಥಕ್ಕಾಗಿಯೋ ತಿಳಿಯದು. ತನ್ನನ್ನು ನಿಷ್ಪಕ್ಷಪಾತದಿಂದ ನಿರ್ಣಯಿಸುವ ಸ್ವಾತಂತ್ರ್ಯವನ್ನು ಅದು ಜನರಿಗೆ ನೀಡಿ ತಾನು ಮಾತ್ರ ನಿರ್ಲಿಪ್ತವಾಗಿ ಕೂರುತ್ತದೆ. ಇತಿಹಾಸದಲ್ಲಿನ ಪಾಠಗಳಿಂದ ನಾವು ಕಲಿತಿರುವ ಕಾರಣಕ್ಕಾಗಿಯೋ ದೇಶವಿನ್ನೂ ಭದ್ರವಾಗಿ ಉಳಿದಿದೆ. ಸಾಮರಸ್ಯಕ್ಕೆ ಸ್ನೇಹಕ್ಕೆ ತಾನು ಸದಾ ತೆರೆದುಕೊಂಡಿದ್ದೇನೆ ಎನ್ನುವುದನ್ನು ಜಗತ್ತಿಗೇ ತೋರಿಸಿದೆ.

'ಆವರಣ' ಕಾದಂಬರಿ ಇತಿಹಾಸದ ವಸ್ತುವನ್ನು ಹೊಂದಿದೆ. ವಸ್ತು ಮಾತ್ರವಲ್ಲ. ಇತಿಹಾಸದ ಸತ್ಯಾಸತ್ಯತೆಯ ಬಗ್ಗೆ ಆಧರಿಸಿ ಕಾದಂಬರಿಯ ಉದ್ದಕ್ಕೂ ವಾಗ್ವಾದಗಳಿವೆ. ಹಾಗೂ ಬಹಳ ಸುಲಭವಾಗಿ ಎದುರಾಳಿಯೆ ಅಂದರೆ ಸಂಘ ಪರಿವಾರವಲ್ಲದ ಸೋತು ಶರಣಾಗುತ್ತದೆ. ಅಂದಮಾತ್ರಕ್ಕೆ ಪುಸ್ತಕವನ್ನು ಒಂದು ಇತಿಹಾಸ ಕಥನವೆಂಬಂತೆ ವಿಶ್ಲೇಷಿಸಲೂ ಸಾಧ್ಯವಿಲ್ಲ. ಏಕೆಂದರೆ ಈ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಐತಿಹಾಸಿಕ ಸಂಗತಿಗಳೇ ಪರಮ ಸತ್ಯ ಎಂದು ಪ್ರತಿಪಾದಿಸಲು ಭೈರಪ್ಪನವರು ಕಾದಂಬರಿಯ ಅಂತ್ಯದಲ್ಲಿ ತಾವು ಪರಿಶೀಲಿಸಿರುವ ಐತಿಹಾಸಿಕ ೫೦ ಉದ್ಗ್ರಂಥಗಳ ಪಟ್ಟಿಯನ್ನೇ ಕೊಟ್ಟಿದ್ದಾರೆ. ಆದರೆ ಅವೆಲ್ಲವೂ ಸಂಘ ಪರಿವಾರದ ಮತ್ತು ಅದೆ ಸುತ್ತಮುತ್ತಲಲ್ಲಿರುವ ಇತಿಹಾಸಕಾರರ ಪುಸ್ತಕಗಳೇ ಜಾತ್ಯತೀತ ನೆಲೆಯಿಂದ ಹೊರಟವಲ್ಲದವರ ಒಂದು ಪುಸ್ತಕವೂ ಇಲ್ಲ. ಹೀಗಾಗಿಯೀ ಭೈರಪ್ಪನವರ ಈ 'ಆವರಣ' ಸಂಘ ಪರಿವಾರದ ಒಂದು ಅಗ್ಗದ ಪ್ರಚಾರ ಸಾಹಿತ್ಯ ಮಾತ್ರವಾಗಿದೆ.

ಕಾದಂಬರಿಯ ಮುನ್ನುಡಿಯಲ್ಲಿ ಭೈರಪ್ಪನವರು ತಾವು ಏಕೆ ಈ ಪುಸ್ತಕಕ್ಕೆ 'ಆವರಣ'ವೆಂದು ಹೆಸರಿಟ್ಟೆ ಎಂದು ವಿವರಿಸುತ್ತಾ 'ಸತ್ಯವನ್ನು' ಮರೆಮಾಚುವ ಕಾರ್ಯಕ್ಕೆ 'ಆವರಣ'ವೆಂದು ಅಸತ್ಯವನ್ನು ಬಿಂಬಿಸುವ ಕಾರ್ಯಕ್ಕೆ ವಿಕ್ಷೇಪವೆಂದೂ ಹೆಸರು. ವ್ಯಕ್ತಿಯ ಮಟ್ಟದಲ್ಲಿ ನಡೆಯುವ ಈ ಕ್ರಿಯೆಯನ್ನು ಅವಿದ್ಯೆಯೆಂದೂ ಸಮೂಹ ಅಥವಾ ಜಗತ್ತಿನ ಮಟ್ಟದಲ್ಲಿ ನಡೆಯುವ ಕ್ರಿಯೆಯನ್ನು ಮಾಯೆ ಎಂದು ಕರೆಯುತ್ತಾರೆ.[೧]

ಭೈರಪ್ಪನವರ ಪ್ರಕಾರ ಆವರಣ ಕಾದಂಬರಿಯ ಕಾಲಘಟ್ಟವಾದ ಮುಸ್ಲಿಮರು ಈ ದೇಶವನ್ನು ಆಳಿದ ಕಾಲಘಟ್ಟದ ಸತ್ಯವನ್ನು ಪ್ರಗತಿಪರರು ಮತ್ತು ಹುಸಿ ಸೆಕ್ಯುಲರ್ ವಾದಿಗಳು ಮುಚ್ಚಿಟ್ಟಿದ್ದಾರೆ; ಅದನ್ನು ಅನಾವರಣಗೊಳಿಸುವುವದೇ ಈ ಕಾದಂಬರಿಯ ಧ್ಯೇಯ. ಅಥವಾ ಗುರಿ. ಅಂದರೆ ಮುಸ್ಲಿಮರು ಮತ್ತು ಅವರ ಧರ್ಮವಾದ ಇಸ್ಲಾಂ ಮೂಲಭೂತವಾಗಿ ಮಾನವ ವಿರೋಧಿಯಾದುದು ಮತ್ತು ಅದು ಮೂಲಭೂತವಾಗಿ ಪರಮಾರ್ಥವಾಗಿಯೂ ಜನಪರವಾಗಿಯೂ ಇದ್ದ ಹಿಂದೂ ಧರ್ಮದ ಮೇಲೆ, ಹಿಂದೂ ಧರ್ಮಿಯರ ಮೇಲೆ ದಾಳಿ ಮಾಡಿ ಕಡು ಭೀಕರ ಅತ್ಯಾಚಾರ ಮಾಡಿತು. ಆದರೆ ಇಂದಿನ ರಾಜಕಾರಣಿಗಳು ಈ ಇತಿಹಾಸವನ್ನು ತಮ್ಮ ಓಟು ರಾಜಕೀಯಕ್ಕಾಗಿ ಮರೆಮಾಚುತ್ತಿದ್ದಾರೆ ಇದು ಈ ಕಾದಂಬರಿಯಲ್ಲಿ ಅವರು ಪ್ರತಿಪಾದಿಸುವ ಸತ್ಯ. ಅಷ್ಟು ಮಾತ್ರವಲ್ಲ, ಭೈರಪ್ಪನವರು ತಮ್ಮ ಈ ದ್ವೇಷಪೂರಿತ ಕಥನಕ್ಕೆ ಪೊಳ್ಳು ಆದರ್ಶದ ಮುಖವಾಡವನ್ನು ತೊಡಿಸುತ್ತಾರೆ. ಮುಸ್ಲಿಂ ಸಮಾಜಕ್ಕೆ ತಿದ್ದಿಕೊಳ್ಳುವ ಅವಕಾಶವನ್ನೇ ಕೊಡುತ್ತಿಲ್ಲ. ತಿದ್ದಿಕೊಳ್ಳುವ ಮೊದಲು ತಪ್ಪಿನ ಅರಿವಾಗಬೇಕಲ್ಲವೆ? ಇತಿಹಾಸದ ಸತ್ಯವನ್ನು ತಿಳಿಯದೆ ತಿದ್ದಿಕೊಳ್ಳುವುದು ಹೇಗೆ?

'ಆವರಣ'ದಲ್ಲಿ ಹಿಂದುತ್ವವಾದಿಗಳು ತೋಡಿರುವ ಪಾತಳಿಯಲ್ಲಿ ಮುಸ್ಲಿಮರನ್ನು ದೂಡಿ ಮತ್ತೆ ತಾವೇ ಅವರನ್ನು ಚಾರಿತ್ರಿಕ ಪಾತಳಿಯಿಂದ ಮೇಲೆತ್ತುವುದಕ್ಕಾಗಿಯೇ

ಅವರ ಮೇಲೆ ದಾಳಿ ಮಾಡುತ್ತಿದ್ದೇವೆಂಬ ಅತ್ಯಂತ ಕುಟಿಲವಾದ ಬ್ರಾಹ್ಮಣಕೆಯ ತಂತ್ರವನ್ನು ಪ್ರಯೋಗಿಸುತ್ತಾರೆ ತಮ್ಮ ಅಂತಾಳದಲ್ಲಿರುವ ಈ ಜನಾಂಗೀಯ ದ್ವೇಷದ ಆವರಣವನ್ನು ಮುಚ್ಚಿ ಸತ್ಯದ ವಿಕ್ಷೇಪವನ್ನು ಸತ್ಯದ ಅನಾವರಣ ಎಂದು ಪ್ರತಿಪಾದಿಸಲು ಭೈರಪ್ಪನವರು ಅತ್ಯಂತ ಚಾಣಕ್ಯತನದಿಂದ ಸಂಘಪರಿವಾರದ ಸಿದ್ಧಾಂತವನ್ನು ಕಾದಂಬರಿಯ ಎರಕದಲ್ಲಿ ಕೊಡುವ ಪ್ರಯತ್ನ ಮಾಡಿದ್ದಾರೆ.

ಲಕ್ಷ್ಮಿ ಎಂಬ ಒಕ್ಕಲಿಗ ಕುಟುಂಬದ ಗಾಂಧಿವಾದಿ ತಂದೆಯ ಮಗಳು ಪುಣೆಯಲ್ಲಿ ಸಿನೆಮಾ ಕಲೆಯ ಬಗ್ಗೆ ಅಧ್ಯಯನ ಮಾಡುತ್ತಾ ಅಮಿರ ಎಂಬ ಮುಸ್ಲಿಂ ತರುಣನನ್ನು ಪ್ರೀತಿಸಿ ಮದುವೆಯಾಗುತ್ತಾಳೆ. ಗಾಂಧೀವಾದಿ ತಂದೆ ಸಹಾ ಅದಕ್ಕೆ ವಿರೋಧ ವ್ಯಕ್ತಪಡಿಸುತ್ತಾನೆ. ಆದರೆ ಅವರಿಬ್ಬರಿಗೂ ಗುರುವಾಗಿದ್ದ ಒಬ್ಬ ಆಷಾಢಭೂತಿ, ವಿಷಯಲಂಪಟ ಮಾರ್ಕ್ಸ್‌ವಾದಿ ಪ್ರೊಫೆಸರ್ ಶಾಸ್ತ್ರಿ ಇವರಿಬ್ಬರಿಗೂ ಪ್ರೋತ್ಸಾಹಿಸಿ ಮದುವೆ ಮಾಡಿಸುತ್ತಾನೆ ಮತ್ತು ಅಮಿರನ ಮನೆಯವರ ಒತ್ತಾಯದ ಮೇರೆಗ ಲಕ್ಷ್ಮಿ ಮತಾಂತರಗೊಳ್ಳುವುದು ಸರಿಯೆಂದು ಸಮರ್ಥಿಸುಕತ್ತಾನೆ ಹೀಗೆ ಲಕ್ಷ್ಮಿ ರಜಿಯಾ ಆದರೂ ಅವಳೊಳಗೆ ಇದನ್ನು ಒಪ್ಪದ ಬಿರುಕು ಇಷ್ಟೇ ಇರುತ್ತದೆ. ಇದು ಅವರಪ್ಪ ತೀರಿಕೊಂಡ ನಂತರ ಹಳ್ಳಿಗೆ ವಾಪಸ್ ಹೋಗ ನೆಲೆ ನಿಂತ ಮೇಲೆ ಇನ್ನೂ ಹೆಚ್ಚಗುತ್ತದೆ. ಅಲ್ಲಿ ಅವರಪ್ಪ ದೇಶ ವಿದೇಶದಿಂದ ಇಸ್ಲಾಂ ಬಗ್ಗ ಭಾರತದಲ್ಲಿ ಮುಸ್ಲಿಮರ ಆಳಿಕೆಯ ಬಗ್ಗೆ ತರಿಸಿಟ್ಟುಕೊಂಡ ಪುಸ್ತಕಗಳ ಗ್ರಂಥಾಲಯವೇ ಇರುತ್ತದೆ.[3]

ತಂದೆಯ ಗ್ರಂಥ ಭಂಡಾರದಲ್ಲಿರುವ ಪುಸ್ತಕಗಳು ವರ್ಷಗಟ್ಟಲೆ ಓದುತ್ತಾ ಕೂರುವ ರಜಿಯಾ ಮತ್ತೆ ಲಕ್ಷ್ಮಿ ಮಾತ್ರವಲ್ಲ, ಆರೆಸ್ಸೆಸ್‌ನ ಲಕ್ಷ್ಮಿಯಾಗಿಬಿಡುತ್ತಾಳೆ. ತನ್ನಗಂಡನಿಂದ ತಲಾಖ್‌ಗೆ ಗುರಿಯಾದರೂ ಹೆದರದೆ ಅಧ್ಯಯನ ಮುಂದುವರಿಸಿ ಪುಸ್ತಕ ಬರೆದು ಸರ್ಕಾರದ ಕಂಗೆಣ್ಣಿಗೂ ಗುರಿಯಾಗುತ್ತಾಳೆ.

ಈ ರೀತಿಯಾಗಿ ಭೈರಪ್ಪನವರ (ಕಾದಂಬರಿಯಲ್ಲಿ) 'ಆವರಣ'ದಲ್ಲಿ ಹಲವಾರು ದೊಂದ್ವಗಳೂ ಇವೆ.

"ತನ್ನ ಮಗ ನಜೀರನಲ್ಲಿ ವೈಜ್ಞಾನಿಕ ಉದಾರ ಭಾವನೆಯನ್ನು ತರಲು ಒಂದೆರಡು ದಿನ ಸಾಲುವುದಿಲ್ಲ. ಮತಧರ್ಮದ ನಂಬಿಕೆಗಾಗಿ ತಂದೆ ತಾಯಿಯನ್ನೇ ಬಲಿಕೊಡು ಎಂದು ಪ್ರವಾದಿಗಳೇ ಹೇಳಿರುವ ಧರ್ಮ ಇದು ಎಂದು ಲಕ್ಷ್ಮಿಗೆ ನೆನಪಿಗೆ ಬರುತ್ತದೆ.[4]

ಇವೆಲ್ಲವನ್ನು ಅವರು ದೇಷವಲ್ಲ ಸತ್ಯದ ದರ್ಶನ ಎಂದು ಹೇಳುತ್ತಾರೆ. ಕೊನೆಗೆ ತಮ್ಮ ವಾದದ ಸಮರ್ಥನೆಗೆ ಸ್ವಾಮಿ ವಿವೇಕಾನಂದರ ಭಾಷಣವೊಂದನ್ನೂ ಬಳಸುತ್ತಾರೆ. ಆದರೆ ಅದೇ ಭಾಷಣದ ಕೊನೆಯಲ್ಲಿ ವಿವೇಕಾನಂದ ಆಡಿರುವ ಮತ್ತೊಂದು ನುಡಿಯನ್ನು ಆವರಣ ಮಾಡಿಬಿಟ್ಟಿದ್ದಾರೆ.

ಆದರೆ ಭೈರಪ್ಪನವರ ಅಪ್ರಜ್ಞೆ ವಿಚಾರದ ಮೆಟ್ಟಿಲನ್ನೇ ಹತ್ತದೆ ಪ್ರಜ್ಞೆಯ ಮಜಲನ್ನು ತಲುಪಿರುವುದರಿಂದ ಅದು ಇನ್ನೊಂದು ಹೆಜ್ಜೆ ಬೆಳೆದು ಪ್ರಜ್ಞಾತೀತವಾಗುವ ಬದಲು ದ್ವೇಷವಾಗಿ ಪಾತಾಳಕ್ಕೆ ಮುಟ್ಟಿದೆ ಎಂಬು ಹೇಳಬಹುದು.

ಮುಸ್ಲಿಂ ಸಮುದಾಯದ ಮೂಲಭೂತ ವಾದವನ್ನು ಟೀಕಿಸುವುದೇನೋ ಸರಿ. ಹಾಗೆಯೇ ಎಲ್ಲಾ ಧರ್ಮದ ಮೂಲಭೂತ ವಾದವನ್ನು ಕೂಡಾ ನಾವು ನಮ್ಮ ಕಣ್ಣಿಗೆ ಕಾಣಿಸಿಕೊಂಡಾಗ ಟೀಕಿಸಿದಾಗ ಮಾತ್ರವೇ ತಾನೆ 'ಮನುಷ್ಯ' ಸಹಜವಾಗಿ ಅರಳಲು ಸಾಧ್ಯ: ಮಾನವೀಯತೆಗೆ ಅರ್ಥಬರಲು ಸಾಧ್ಯ, ಅಲ್ಲವೇ? ಆಧನಿಕ ವಿದ್ಯೆಗೆ ಒಳಗಾದ ಪ್ರತಿಯೊಬ್ಬರೂ ಸ್ತ್ರೀವಾದಿಯಾಗಿರುತ್ತಾರೆ.....ಹೆಂಗಸರಂತೂ ಪ್ರಖರವಾದ ಸ್ತ್ರೀವಾದಿಯಾಗಿಯೇ ಇದ್ದಾರ. ಸ್ತ್ರೀವಾದದ ಮೊನಚಿಲ್ಲದ ಆಧುನಿಕ ವಿದ್ಯಾವಂತ ಮಹಿಳೆ ಒಬ್ಬಳೂ ಇರಲು ಸಾಧ್ಯವಿಲ್ಲ ನಿನ್ನ ಧರ್ಮದ ಹೆಂಗಸರಿಗೆ ಮುಕ್ತವಾಗಿ ಆಧುನಿಕ ವಿದ್ಯೆಯನ್ನು ಕೊಟ್ಟರೆ ಅವರೂ ಇಂತಹ ಪ್ರಶ್ನೆಗಳನ್ನೆತ್ತುತ್ತಾರೆ. ಅಗತ್ಯಬಿದ್ದರೆ ಯಾರು ಗೌಣ, ಯಾರು ಪ್ರಧಾನ ಪಾತ್ರ ಎಂಬಂತಹ ಪ್ರಶ್ನೆಗಳನ್ನೆತ್ತುತ್ತಾರೆ.

ಸ್ತ್ರೀವಾದಿಗಳು ಹಿಂದೂ ಧರ್ಮದಲ್ಲಿನ ಕುಟುಂಬದ ಒಳಗಿನ ಹಿಂಸೆಯನ್ನು ಪ್ರಶ್ನಿಸುವಂತೆ ಮುಸ್ಲಿ ಸಮುದಾಯದಲ್ಲೂ ಪ್ರಶ್ನಿಸುತ್ತಾರೆ. ಪಿತೃ ಪ್ರಧಾನತೆ, ಕೋಮುವಾದದ ಸಂಚನ್ನು ಎಲ್ಲಾ ಧರ್ಮದಲ್ಲೂ ಭೇದಿಸಲು ಪ್ರಯತ್ನಿಸುತ್ತಾರೆ. ಯಾವುದೇ ಧರ್ಮ ರಾಜಕಾರಣವನ್ನು ಹೆಂಗಸರನ್ನು ಒಡೆಯಬಾರದು ಎಂದು ಆಶಿಸುತ್ತಾರೆ. ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಎಲ್ಲ ಹೆಂಗಸರೂ ಧರ್ಮ ರಾಜಕಾರಣ ಒಡ್ಡುವ ಬಂಧನದ ಸವಾಲುಗಳನ್ನು ಎದುರಿಸಿ, ಬಿಡುಗಡೆಯ ಹಾದಿ ಸ್ಪಷ್ಟಪಡಿಸಿಕೊಳ್ಳಬೇಕೆನ್ನುತ್ತಾರೆ. ಸ್ತ್ರೀವಾದಿಗಳು ಕೋಮುವಾದಿ ರಾಜಕಾರಣದಂತೆ ಒಬ್ಬ ಹೆಂಗಸನ್ನು ಇನ್ನೊಬ್ಬಳಿಗೆ ಎದುರಾಗಿ ನಿಲ್ಲಿಸಿ ಹಿಂಸೆ ಭೋದಿಸುವುದಿಲ್ಲ. ಬದಲು ನಮ್ಮ ಸ್ವಂತಿಕೆ, ಸ್ವವಿಚಾರ, ಜೀವನದ ಬಿಡುಗಡೆಯ ಹಾದಿಯಲ್ಲಿ ಕೈಹಿಡಿದು ನಡೆಯಬೇಕಾದ ಅಗತ್ಯತೆಯ ದೃಷ್ಟಿಕೋನವನ್ನು ಸೂಚಿಸುತ್ತಾರೆ.

'ಆವರಣ' ಕಾದಂಬರಿಯಲ್ಲಿ ಮುಸ್ಲಿಂ ಮೂಲಭೂತ ವಾದವನ್ನು ವಿರೋಧಿಸುವುದು ಮಾತ್ರ. ಗೋಹತ್ಯೆ ನಿಷೇಧ, ಕುಟುಂಬ ಯೋಜನೆ, ನಾಗರಿಕ ಸಂಹಿತೆ, ದೇವಸ್ಥಾನದ ವಿನಾಶ, ಟಿಪ್ಪು, ಔರಂಗಜೇಬನ ಟೀಕೆ, ಘೋಷಾ ಪದ್ಧತಿಯ ವಿರೋಧ ಇವು ಭೈರಪ್ಪನವರ ಮುಖ್ಯ ಗುರಿಗಳಾಗಿರಬೇಕು.

ಇದರ ವಿರುದ್ಧವಾಗಿ ಒಕ್ಕಲಿಗ ಹುಡುಗಿ ಲಕ್ಷ್ಮಿಯನ್ನು ಕಥೆಯ ಮುಖ್ಯ ನಾಯಕಿಯನ್ನಾಗಿ ಮಾಡಿದ್ದಾರೆ. ಒಂದುವೇಳೆ ದಲಿತ ಹುಡುಗಿಯನ್ನೇ ನಾಯಕಿಯನ್ನಾಗಿಸಿದ್ದರೆ ಏನಾಗುತ್ತಿತ್ತು? ಅಥವಾ ಅಮೀರ ಎಂಬ ಮುಸ್ಲಿಂ ಹುಡುಗನ ಸ್ಥಾನದಲ್ಲಿ ಹಿಂದೂ ಹುಡುಗನಾಗಿದ್ದರೆ. ನಾಯಕಿಯ ಸ್ಥಾನದಲ್ಲಿ ಮುಸ್ಲಿಂ ಹುಡುಗಿಯಾಗಿದ್ದರೆ, ಹೀಗೆ ಪ್ರಶ್ನೆಗಳ ಸರಮಾಲೆಯೇ ಹುಟ್ಟುತ್ತವೆ ಆದರೂ ಭೈರಪ್ಪನವರಿಗೆ

ನುಣುಚಿಕೊಳ್ಳಲು ಒಕ್ಕಲಿಗ ಹುಡಿಗಿಗೆ ನಾಯಕಿಯನ್ನಾಗಿಸಿದರೆ ಮಾತ್ರ ತಾವು ಸೇಫ್ ಆಗಿರಬಹುದು ಎಂಬ ಚಾಣಕ್ಯತನದಿಂದ ಒಕ್ಕಲಿಗ ಹುಡಿಯಾದ ಲಕ್ಷ್ಮಿಯನ್ನೇ ನಾಯಕಿಯನ್ನಾಗಿಸಿದ್ದಾರೆ.

ಲಕ್ಷ್ಮಿ ಅಮೀರನನ್ನು ಮದುವೆಯಾಗಲು ಹೊರಟಾಗ ಆಕೆಯ ತಂದೆ ಬುದ್ಧಿವಾದ ಹೇಳುತ್ತಾರೆ. ಮಗಳೆ ನೀನು ಮದುವೆಯಾಗುವುದು ಮುಖ್ಯವಲ್ಲ. ನಿನ್ನ ಹೊಟ್ಟೆಯಿಂದ ಹುಟ್ಟಿದ ಮಗುವೋ ಅಥವಾ ಅದರ ಹೊಟ್ಟೆಯಿಂದ ಹುಟ್ಟಿದ ಮಗವೋ ಮುಂದೆ ಹಿಂದೂ ದೇವಸ್ಥಾನಗಳನ್ನು ಒಡೆದು ನಾಶವಾಡುತ್ತದೆ ಮಗಳೆ ಎಂದು ಬುದ್ಧಿವಾದ ಹೇಳುತ್ತಾರೆ. ಆದರೆ ಲಕ್ಷ್ಮಿ ತಂದೆಯ ಮಾತಿಗೆ ಕಿವಿಗೊಡದೆ ಅಮೀರನನ್ನು ಮದುವೆಯಾಗುತ್ತಾಳೆ. ಮುಂದೆ ಅವಳೇ ಪಶ್ಚಾತ್ತಾಪ ಪಡುತ್ತಾಳೆ ತಂದೆ ಹೇಳಿದ ಮಾತು ನೆನಪಿಗೆ ಬರುತ್ತದೆ.

ಈ ಸನ್ನಿವೇಶದಲ್ಲಿ ದಲಿತ ಮಹಿಳೆ ನಾಯಕಿಯಾಗಿದ್ದರೆ, ಭೈರಪ್ಪನವರು ಏನು ಹೇಳುತ್ತಿದ್ದರು? ಮತ್ತು ದಲಿತ ಮಹಿಳೆಯ ತಂದೆ ಏನು ಹೇಳುತ್ತಿದ್ದರು ಎಂಬುದು ಸಂದೇಹಕ್ಕೆ ಆಸ್ಪದ ಮಾಡಿಕೊಡಲಾಗಿದೆ.

ಲಕ್ಷ್ಮಿ ರಜಿಯಾ ಆಗಿ ಅನುಭವಿಸುವ ಮಾಸಿಕ ಕ್ಷೋಭೆಯ ಬಗ್ಗೆ ಭೈರಪ್ಪನವರು ಬರೆಯುತ್ತಾರೆ. ಆದರೆ ಬೇರೆ ಜಾತಿಯಲ್ಲಿ ಮದುವೆಯಾಗುವ ಪ್ರತಿಯೊಬ್ಬರಲ್ಲೂ ಈ ರೀತಿಯ ಸಾಂಸ್ಕೃತಿ ವ್ಯತ್ಯಾಸಗಳ ದ್ವಂಧ್ವ ಇದ್ದೇ ಇರುತ್ತದೆ. ಹಾಗಾಗಿ ವಿಭಿನ್ನತೆಗಳಲ್ಲಿ ಏಕತೆ ಕಾಣುವ ಮನಸ್ಸೊಂಧು ನಮ್ಮಲ್ಲಿ ಬೆಳೆಯಬೇಕಾಗಿದೆ ಎಂದು ಭೈರಪ್ಪನವರಿಗೆ ಅನ್ನಿಸದೇ ಇರುವುದು ವಿಷಾದದ ಸಂಗತಿ. ಹೆಣ್ಣನ್ನು ಧಾರ್ಮಿಕ ಚಿಹ್ನೆಯಾಗಿ ನಮ್ಮ ಸಂಸ್ಕೃತಿಯ ಪ್ರತಿನಿಧಿಯಾಗಿ, ಅನಾದಿಕಾಲದಿಂದಲೂ ಬಳಸಿಕೊಂಡು ಬರಲಾಗುತ್ತಿದೆ. 'ಆವರಣ'ದಲ್ಲಿಯೂ ಭೈರಪ್ಪನವರು ಅದೇ ಕೆಲಸವನ್ನು ಮಾಡಲು ಪ್ರಯತ್ನಸಿದ್ದಾರೆ. ಈ ಕಥೆಯ ನಾಕಿಯನ್ನು 'ಭಾರತೀಯನಾರಿ'ಯ ಕಲ್ಪನೆಯನ್ನು ಜನಪ್ರೀಯವಾಗಿ ಎತ್ತಿ ಹಿಡಿಯಲು ಮುಂದಾಗಿದ್ದಾರೆ. ಆದರೆ ರಜಿಯಾಗೆ ಸ್ವಧರ್ಮದ ಆಕರ್ಷಣೆಯಲ್ಲಿ ಪ್ರಯತ್ನಿಸಬಹುದಿತ್ತಲ್ಲಾ ಎಂದು ಅನಿಸುತ್ತದೆ. ಅಪ್ಪನ ಗಾಂಧೀವಾದದಲ್ಲಿ, ಉಗ್ರನರಸಿಂಹನ ವಿಗ್ರಹ ಕುರಿತು ಇರುವ ಹೊಯ್ದಾಟಗಳು ಹೆತ್ತ ಮಗ ನಜೀರನ ಬಗ್ಗೆ ಕಾಣಿಸದಿರುವುದು ಸ್ವಲ್ಪ ಆಶ್ಚರ್ಯವಾಗುತ್ತದೆ. ನಜೀರನ ಬಗ್ಗೆ ಲಕ್ಷ್ಮಿಯು ಆತ ತನ್ನ ಅಜ್ಜ-ಅಜ್ಜಿಯರ ಹತ್ತಿರ ಚಿಕ್ಕಂದಿನಿಂದಲೂ ಬೆಳೆದ ಆದ್ದರಿಂದಲೇ ಆತ ಆ ರೀತಿಯಾಗಿ ಬೆಳೆದ ಎಂದು ಸಮಜಾಯಿಸಿ ಉತ್ತರಿಸುತ್ತಾಳೆ.[3] ಆತನ ಬಗೆಗಿನ ಆಕೆಯ ನಿಲುವುಗಳೆಲ್ಲ ಕರುಳಿನ ಸಂಬಂಧದ ರೀತಿ ಧ್ವನಿಸದೇ ಅವನೊಬ್ಬ ಬೇರೆ ರೀತಿ ಧ್ವನಿಸುತ್ತದೆ. ಇಷ್ಟೆಲ್ಲಾ ನೋವು, ಕಷ್ಟಗಳಲ್ಲಿ ಬೆಂದು ಹೋಗಿರುವ ರಜಿಯಾ (ಲಕ್ಷ್ಮಿಯ) ರಕ್ಷಣೆಗೆಂದು ಕೊನೆಯ ಗಳಿಗೆಯಲ್ಲಿ ಅಮೀರನನ್ನು ಕರೆತರುತ್ತಾರೆ ಭೈರಪ್ಪನವರು.

ರಜಿಯಾ (ಲಕ್ಷ್ಮಿ)ಯು ತನ್ನ ಗಂಡನಾದ ಅಮೀರನಿಂದಲೂ ಸುಖವಾಗಿರಲಿಕ್ಕಾಗಲಿಲ್ಲ, ಮಗ ನಜೀರ ಸೌದೆಯಲ್ಲಿ ಕೆಲಸಗಾರ ಒಳ್ಳೆಯ ಸಂಬಳವನ್ನು ಗಿಟ್ಟಿಸಿದ್ದ ಆದರೆ ತಾಯಿಗೆ ಅವನಿಂದಲೂ ಸುಖ ಸಿಗಲಿಲ್ಲ. ಅತ್ತೆ ಮಾವಂದಿರಂತೂ ಬೇಹುಗಾರಿಕೆಯವರನ್ನು ಮನೆಗೆ ಕರೆಸಿ ಚಿತ್ರಹಿಂಸೆ ಕೊಟ್ಟರು. ಇಷ್ಟೆಲ್ಲ ಒಂದು ಹೆಣ್ಣಿಗೆ ಶೋಷಣೆಯಾದರೂ ಭೈರಪ್ಪನವರಿಗೆ ಏನೂ ಅನ್ನಿಸಲೇ ಇಲ್ಲ. ಇದು ವಿಷಾದಕರವಾದ ಸಂಗತಿ.

ಕೊನೆಗಳಿಗೆಯಲ್ಲಿ ಗಂಡ ಅಮೀರನನ್ನು ಕರೆತರುತ್ತಾರೆ. ಮುಸ್ಲಿಂ ಗಂಡಸರಲ್ಲೂ ಸ್ವಲ್ಪಮಟ್ಟಿಗೆ ಒಳ್ಳೆಯತನವಿದೆ ಎಂದು ಗ್ರಹಿಸಿದ್ದಕ್ಕೆ ಸ್ವಲ್ಪ ನಿಟ್ಟುಸಿರು ಬಿಡುವಂತಾಗಿದೆ. ಆಕೆ ತನ್ನ ವ್ಯಕ್ತಿತ್ವದಿಂದ ಗೆದ್ದಳು, ಹಿಂದೂ ಧರ್ಮದತ್ತ ಸೆಳೆದಳು ಎಂಬ ಸಮಾಧಾನಕರವಾದ ಸಂಗತಿಯಾಗಿದೆ.

**ಕೊನೆ ಟಿಪ್ಪಣಿಗಳು**

೧. ಎಸ್. ಎಲ್. ಭೈರಪ್ಪ, 'ಆವರಣ', ೨೦೦೭, ಸಾಹಿತ್ಯ ಭಂಡಾರ, ಬೆಂಗಳೂರು. ಪುಟ ೪
೨. ಅದೇ, ಪುಟ ೧೯೫.
೩. ಅದೇ, ಪುಟ ೬೫.
೪. ಅದೇ, ಪುಟ ೨೪೩.
೩೫. ಅದೇ, ಪುಟ ೭೪.

## ಅಧ್ಯಾಯ ೫

## ಹಿಂದೂತ್ವದ ಮೇಲೆ 'ಆವರಣ' ಎಂಬ ಪರದೆ (ಮುಖವಾಡ)

ಇಡೀ ಕಾದಂಬರಿಯಲ್ಲಿ ಹಿಂದೂತ್ವವಾದಿಗಳಿಗಾಗಿರುವ ಚಾರಿತ್ರಿಕ ಅನ್ಯಾಯದ ಬಗ್ಗೆ ಹಳಹಳಿಕೆ, ಪ್ರಗತಿಪರ ಅನ್ನಿಸಿಕೊಂಡವರು ಡೊಳ್ಳುತನ, ದಬ್ಬಾಳಿಕೆ ಬಗೆ ಲೇವಡಿ ಮತ್ತು ಸಿಟ್ಟು ತುಂಬಿದೆ. ಮತ್ತು 'ಸತ್ಯ' ತಮ್ಮ ಕಡೆ ಇದ್ದರೂ ನಮ್ಮ ಮಾತು ಯಾರೂ ಕೇಳುತ್ತಿಲ್ಲವಲ್ಲ ಎಂಬ ಹತಾಶೆ, ಉದ್ವೇಗ, ಆತಂಕದ ಛಾಯೆ ದಟ್ಟವಾಗಿ ವ್ಯಾಪಿಸಿದೆ. ತಾವೇ ಹುಟ್ಟಿಸಿಕೊಂಡಿರುವ ಕಾಲ್ಪನಿಕ ಪೈಪೋಟಿಯಲ್ಲಿ ಮುನ್ನುಗ್ಗುವ ಈ ಛಲ, ಮುಂದೊಂದು ದಿನ ಈ ಕಾದಂಬರಿಯನ್ನು ಪಠ್ಯ ಪುಸ್ತಕ ಮಾಡಿದರೂ ಆಶ್ಚರ್ಯವಿಲ್ಲ. ಹಾಗಾದಾಗ ಒಂದು ಕಾದಂಬರಿಯನ್ನು ಓದುವ ಬಗೆ, ಅದರಲ್ಲೂ ಚಾರಿತ್ರಿಕ ವಸ್ತು ಆಧರಿಸಿ ಬರೆದ ಕೃತಿಗೂ ಇರುವ ವ್ಯತ್ಯಾಸ, ಓದುಗರ ನಿರೀಕ್ಷೆಗೂ, ಲೇಖಕರ ಆಶಯಕ್ಕೂ ಇರುವ ಸಂಬಂಧ, ಒಂದು ಕೃತಿಯ ಸಫಲತೆ ಅಥವಾ ಸೋಲನ್ನು ನಿರ್ಧರಿಸುವ ಮಾನದಂಡಗಳು ಯಾವುವು? ಎಂಬುದನ್ನು ಚರ್ಚಿಸಲು ಒಂದು ಒಳ್ಳೆಯ ಕೃತಿಯಷ್ಟೆ. ಓಗ್ಗದ 'ಜನಪ್ರಿಯ' ಕಾದಂಬರಿ ಕೂಡಾ ಕೆಲಸಕ್ಕೆ ಬರುತ್ತದೆ. ಸಾಹಿತ್ಯ-ಸಾಂಸ್ಕೃತಿಕ ವಿಶ್ಲೇಷಣೆಯಲ್ಲಿ ಆಸಕ್ತಿ ಇರುವ ಓದುಗರಿಗೆ ಕೃತಿಯೊಂದನ್ನು ಅದರ ವಾಚ್ಯಾರ್ಥದ ವಿರುದ್ಧ ಹೇಗೆ ಓದಲು ಸಾಧ್ಯ ಮತ್ತು ಹಾಗೆ ಓದಿದಾಗ ಕೃತಿಯ ನಿರೂಪಣಾ ತಂತ್ರ ಮತ್ತು ಅದರ ಒಳ ಆಶಯದ ನಡುವಿನ ಬಿರುಕುಗಳನ್ನು ಹೇಗೆ ಗ್ರಹಿಸಬಹುದು ಎನ್ನುವುದನ್ನು ತೋರಲು 'ಆವರಣ' ಕಾದಂಬರಿಯು ವಿಫಲವಾದ ಸಾಮಗ್ರಿಯನ್ನು ಒದಗಿಸುತ್ತದೆ.[೧]

ಹಿಂದೂತ್ವವಾದ ಪ್ರಚಾರಕ್ಕೆ 'ಪಾಂಡಿತ್ಯಪೂರ್ಣ' ಹಾಗೂ 'ವೈಚಾರಿಕ' ಬರಹಗಳಿಗೇನೂ ಕೊರತೆ ಇಲ್ಲ.

ಆದರೆ ಭಾವಾವೇಶದಿಂದ ಎಲ್ಲಾ ಜನಸಾಮಾನ್ಯರು ಎಲ್ಲಾ ಕೃತಿಗಳನ್ನು ಓದುವುದಿಲ್ಲ. 'ಆವರಣ' ಕಾದಂಬರಿಯಲ್ಲಿ ಇದರ ಬಗ್ಗೆಯೇ ಅನೇಕ ಕಡೆ ಉಲ್ಲೇಖವಿದೆ. ಯಾಕೆ ಕೋಮುವಾದಿ ಚರಿತ್ರೆಯನ್ನು ಯಾರೂ ಗಂಭೀರವಾಗಿ ತೆಗೆದುಕೊಳ್ಳುವಂತಿಲ್ಲ ಎಂಬುದನ್ನು ಕಾದಂಬರಿ ಎಲ್ಲೂ ಪ್ರಾಮಾಣಿಕ ಆತ್ಮವಿಶ್ಲೇಷಣೆಗೆ ಗುರಿಪಡಿಸುವುದಿಲ್ಲ. ಬದಲಿ ತಮ್ಮ

ಮಾತನ್ನು ಯಾರೂ ಕೇಳುತ್ತಿಲ್ಲ, ಇವೆಲ್ಲಾ ಪ್ರಗತಿಪರರ ಹುನ್ನಾರ ಮತ್ತು ಸರ್ಕಾರದ ಭೋಳೆತನ ಎಂಬ ಆರೋಪವಿದೆ.[3]

ಈ ತರದ ಆರೋಪ, ಜಗಳವನ್ನು ಕಾದಂಬರಿ ಮೂಲಕ ಮಾಡಲು ಹೊರಟ ಭೈರಪ್ಪನವರಿಗೆ ಕೆಲವು ಅನುಕೂಲಗಳಿರುವಂತೆ, ಹಲವಾರು ತೊಡಕುಗಳೂ ಉಂಟಾಗಿ ಭೈರಪ್ಪನವರಿಗೆ ಮುಖಭಂಗವಾಗಿದೆ. ಅನುಕೂಲವೆಂದರೆ ಕಾದಂಬರಿಯೆಂಬ ಕಲಾಕೃತಿಯ ಚೌಕಟ್ಟು ತಮಗೆ ಬೇಕಾದ ಸ್ವಾತಂತ್ರ್ಯವನ್ನು ಕಲ್ಪಿಸಿಕೊಡುವುದು. ಆದರೆ ಅನೇಕ ಕಡೆ ಇದು ಕಾದಂಬರಿಯನ್ನು ಅನುಭವ ಅಥವಾ ತಿಳುವಳಿಕೆಯ ವಿಸ್ತಾರವನ್ನಾಗಿಸುವ ಬದಲು, ಒಂದು ಚರ್ಚೆಯ ಮಟ್ಟಕ್ಕೆ ಇಳಿಸಿಬಿಡುತ್ತದೆ. ಹೇಗೆಂದರೆ ಕಾದಂಬರಿಯ ಕೊನೆಯಲ್ಲಿ ನಡೆಯುವ ದೆಹಲಿ ಸೆಮಿನಾರೇ ಕಣ್ಣೆದುರಿಗೆ ರಾರಾಜಿಸುತ್ತದೆ. ಸಮಸಾಲಿನ ಸಂದರ್ಭ ಹೇಗೂ ಸೃಷ್ಟಿಯಾಗಿದೆ, ಅದರಲ್ಲಿ ತಮ್ಮ ವಾಗ್ವಾದಗಳನ್ನು ಸೇರಿಸಿದರೆ ಈ ಕಾದಂಬರಿಗೆ ಯಾವ ಧಕ್ಕೆ ಬಾರದು ಎಂಬ ತಂತ್ರವನ್ನು ಅವರು ಬಳಸಲು ಮುಂದಾದರೂ ಸಹಿತ, ಅಲ್ಲಿ ಲಕ್ಷ್ಮಿಯ ವಾದಕ್ಕೆ ತೀರಾ ಬಾಲಿಶವಾದ ಪ್ರತಿಕ್ರಿಯೆಯನ್ನಷ್ಟೇ ಲೇಖಕರು ಸೃಷ್ಟಿಸಿದ್ದಾರೆ. ಇದು ಭೈರಪ್ಪನವರಿಗೆ ಗೊತ್ತಿಲ್ಲದ ವಿಷಯವೇನಲ್ಲ ಎಂಬುದು ಮನಗಾಣುವಂತಾಗಿದೆ.

ಹಾಗೆ ನೋಡಿದರೆ ವಸಾಹತು ಸಂದರ್ಭದಲ್ಲಿ ತಮ್ಮ ಸಾಸ್ಕೃತಿಕ ಹಿರಿಮೆಯನ್ನು ಸ್ಥಳಿಯರಿಗೆ ಮನದಟ್ಟು ಮಾಡಿ, ಅವರು ಅಂತರಂಗದಲ್ಲಿ ಅದರ ಉನ್ನತೆಯನ್ನು ಸ್ಥಾಪಿಸಲು ಬ್ರಿಟಿಷರಿಗೆ ನೆರವಾದದ್ದು ಭೈರಪ್ಪನವರ ಕೃತಿಗಳೇ. ಎಡಪಂಥೀಯ ಚರಿತ್ರೆಕಾರರು ಚರಿತ್ರೆಯ ಮೇಲೆ ಮುಚ್ಚಿರುವ ಸುಳ್ಳು ಪರದೆಯನ್ನು ಕಿತ್ತು ಹಾಕಿ, ಗತಕಾಲದ ಹಿಂದೂ ವೈಭವದ ಬಿಜ ಸ್ವರೂಪವನ್ನು ತೋರಿಸಲು ತಮ್ಮ ಹಿಂದುತ್ವ ಐಡಿಯಾಲಾಜಿಯನ್ನು ಸತ್ಯದ ಹೆಸರಿನಲ್ಲಿ ಮುಚ್ಚಿಹಾಕುವ, ತಾವು ಹೇಳುವುದೆಲ್ಲಾ ಸತ್ಯವೆಂದೇ ಪ್ರತಿಪಾದಿಸುವ ಕೆಲಸವನ್ನು ಭೈರಪ್ಪನವರು ಈ ಕಾದಂಬರಿಯ ಮುಖಾಂತರ ಮಾಡಿದ್ದಾರೆ.

'ಆವರಣ'ವು ಐತಿಹಾಸಿಕ ಕಾದಂಬರಿ ಎಂದು ಸ್ವತಃ ಅವರೇ ಕರೆದುಕೊಂಡಿದ್ದರಾದರೂ ಆವರಣದಲ್ಲಿ ಎರಡು ಸಮಾನಾಂತರ ಕಥೆಗಳಿವೆ. ಐತಿಹಾಸಿಕ ಎನ್ನಬಹುದಾದ ಭಾಗವನ್ನು ಕಾದಂಬರಿಯೊಳಗಿನ ಕಾದಂಬರಿ ಗುರುತಿಸುತ್ತದೆ. ಎರಡನೆಯದು ಸಮಕಾಲಿನ ಘಟನೆಗಳನ್ನು ಕುರಿತದ್ದು. ಆದರೆ ಇವೆರಡೂ ಕಥಾನಕಗಳು ಕಾದಂಬರಿಯಲ್ಲಿ ಹಾಸುಹೊಕ್ಕಾಗಿ ಬರುವುದಲ್ಲದೆ, ಎರಡರ ವಸ್ತು-ವಿಚಾರಗಳು ಕೂಡಾ ಇಸ್ಲಾಂ-ಹಿಂದೂ ನಡುವಿನ ಸಂಘರ್ಷ ಕುರಿತದ್ದೇ ಆದ್ದರಿಂದ ಎರಡೂ ಕಥೆಗಳ ಕಾಳಜಿ ಸಮಾನಾಂತರವಾಗಿಯೇ ಹರಿಯುತ್ತದೆ.

ಈ ಕಥೆಯ ಪ್ರಾರಂಭದಲ್ಲಿಯೆ ಲಕ್ಷ್ಮಿಯು ರಜಿಯಾಳಾಗಿ ಪರಿವರ್ತನೆಗೊಂಡಾಗ, ಲಕ್ಷ್ಮಿಗೆ ಇಡೀ ಇಸ್ಲಾಂ ಧರ್ಮ ಮತ್ತು ಪ್ರಗತಿಪರ ಇತಿಹಾಸದ ಧೋರಣೆ ಕುರಿತು ಅನುಮಾನಗಳಿವೆ. ಈ ಅನುಮಾನ ಒಂದು ಕಡೆ ಅವಳ ವೈಯಕ್ತಿಕ ನೆಲೆಯಲ್ಲಿ, ಅವಳ ಅನುಭವದ ಮೂಲಕ ನೆಲಗೊಂಡರೆ, ಅವಳ ವೈಚಾರಿಕತೆ ಅವರ ತಂದೆ ಸಂಗ್ರಹಿಸಿಟ್ಟಿರುವ

ಪುಸ್ತಕ-ಟಿಪ್ಪಣಿಗಳಿಂದ ರೂಪಗೊಳ್ಳುತ್ತದೆ. ಹಲವು ತಿಂಗಳ ಅಧ್ಯಯನ, ಪ್ರವಾಸ ಅವಳ ವೈಚಾರಿಕತೆಯು ಸಂಪೂರ್ಣ ಬದಲಾವಣೆಗೂ ಎದುರಾಳಿಗಳನ್ನು ಖಂಡತುಂಡವಾಗಿ ಶಮನಗೊಳಿಸುವ ಶಕ್ತಿ ಅವಳಲ್ಲಿ ರೂಪುಗೊಳ್ಳುತ್ತದೆ.

ಲಕ್ಷ್ಮಿ ಈಗ ತಂದೆಯವರು ಬಿಟ್ಟುಹೋದ ಗ್ರಂಥಗಳನ್ನು ಓದಿ ತುಂಬಾ ಬದಲಾವಣೆ ಹೊಂದಿದ್ದಾಳೆ. ಅವಳಲ್ಲಿ ಕೂಡ ತಂದೆಯನ್ನು ಕಳಕೊಂಡ ನೋವಿದೆ ದುಃಖವಿದೆ. ಆದರೂ ಪ್ರೀತಿ, ದ್ವೇಷ, ಸಮಸ್ಯೆ, ಸ್ತ್ರೀವಾದ ಎಲ್ಲದರ ಮಧ್ಯೆ ಅವಳು ಬೆಳೆದು ನಿಲ್ಲಲು ಪ್ರಯತ್ನಿಸಿದ್ದಾಳೆ.

ನರಸಿಂಹೇಗೌಡರ ಶಾಪ ಲಕ್ಷ್ಮಿಗೆ ತಟ್ಟುವುದನ್ನು ಕಾದಂಬರಿಯ ಚೌಕಟ್ಟಿನಲ್ಲಿಯೇ ಕಾಣಬಹುದು; ಯಾವುದೋ ತಲೆಮಾರಿಗಾಗಿ ಕಾಯಬೇಕಾಗಿಲ್ಲ. ಅವಳ ಮಗ ನಜೀರ್ ಅಪ್ಪಟ ಇಸ್ಲಾಂ ವಾದಿಯಾಗಿ ಸೌದಿ ಅರೇಬಿಯಾದಿಂದ ಬರುತ್ತಾನೆ. ಈಗ ತನ್ನ ತಾತನ ಮಾತುಗಳು ನಿಜವಾಗಬೇಕೆಂದರೆ ಅವನು ಒಂದು ದೇವಸ್ಥಾನವನ್ನು ಕೆಡವಲೇಬೇಕು. ಆ ಗುಣ ಅವನ ರಕ್ತದಲ್ಲಿದೆ. ಅಥವಾ ಕೆಡವುದನ್ನು ಸಮರ್ಥಿಸಬೇಕು. ಏಕೆಂದರೆ ಅವನು ಅಮೀರನ ಮಗ ಹಲವು ವರ್ಷಗಳ ನಂತರ ಮಗ ತನ್ನ ತಾಯಿಯನ್ನು ನೋಡಲು ಬಂದಾಗ ಅವನು ತಾಯಿಯ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವುದಿಲ್ಲ. ಬದಲಾಗಿ ಇಸ್ಲಾಂ ಧರ್ಮದ ಶ್ರೇಷ್ಠತೆಯ ಬಗ್ಗೆ ಭಾಷಣ ಬಿಗಿಯುತ್ತಾನೆ. ಇದು ತಾಯಿ ಮಕ್ಕಳ ಸಂಬಂಧವನ್ನೇ ಅವಮಾನ ಮಾಡಿದಂತಾಗುತ್ತದೆ. ಇಂಥ ಕೃತಕ ಸನ್ನಿವೇಶವನ್ನು ಯಾರ ಸಂತೋಷಕ್ಕಾಗಿ ಅಥವಾ ಯಾವ ಪುರುಷಾರ್ಥಕ್ಕಾಗಿ ಭೈರಪ್ಪನವರು ಮಾಡಿದ್ದಾರೆ ಗೊತ್ತಿಲ್ಲ.

ಮುಸ್ಲಿಮನಾದವನು ಆಧುನಿಕತೆಗೆ ತೆರೆದುಕೊಳ್ಳುವುದು ಸಾಧ್ಯವೇ ಇಲ್ಲ. ಒಂದು ವೇಳೆ ಹಾಗಾದರೂ ಅವನು ಎಡಬಿಡಂಗಿಯಾಗಿ ಇಸ್ಲಾಂ ಧರ್ಮದ ಸನಾತನ ವಾದಕ್ಕೆ ಹಿಂದಿರುಗುತ್ತಾನೆ ಎಂದು ಅಮೀರನಂಥ ವ್ಯಕ್ತಿತ್ವವಿಲ್ಲದ ಪಾತ್ರದ ಮೂಲಕ ಹೇಳಲು ಹೊರಟಿದ್ದಾರೆ ಭೈರಪ್ಪನವರು. ಇವರು ಯಾರಿಗೂ ಹಿಂದೆ ಮುಸ್ಲಿಮರು ಹಿಂದೂ ದೇವಾಲಯಗಳನ್ನು ಧ್ವಂಸ ಮಾಡಿದ ಬಗ್ಗೆ ಯಾವ ಪಶ್ಚಾತ್ತಾಪವೂ ಇಲ್ಲ. ಅವರು ಮಾಡಿದ ತಪ್ಪುಗಳಿಗೆ ತಾವು ಕಾರಣರಲ್ಲದಿದ್ದರೂ ಅವರ ಪರವಾಗಿ ಇವರು ಕ್ಷಮೆ ಕೇಳಬೇಕು ಎನ್ನುವುದು ಭೈರಪ್ಪನವರ ವಾದವಾಗಿರಬಹುದು.

ಈ ದೇಶದ ಹಿಂದೂಗಳು, ಮುಖ್ಯವಾಗಿ ಮೇಲ್ಜಾತಿಯವರು, ಇಲ್ಲಿನ ಮುಸ್ಲಿಮರಿಗಿಂತಲೂ ಉತ್ತಮರಾದ್ದರಿಂದ ಅವರಿಗೆ ಪಾಪಪ್ರಜ್ಞೆ ಕಾಡುತ್ತದೆ. ಆದರೆ ಮುಸ್ಲಿಮರಿಗೆ ಅದು ಸಾಧ್ಯವೇ ಇಲ್ಲ. ಆ ಧರ್ಮವೇ ಅಂತಹುದಲ್ಲವೇ? ಅದೇ ಸಮಯದಲ್ಲಿ ಈ ಪಾಪ ಭೀರುಗಳು ಬಾಬ್ರಿ ಮಸೀದಿಯನ್ನು ಕೆಡವಿದ್ದ ಭೈರಪ್ಪನವರ ಪ್ರಕಾರ ಅತಿ ಸಮರ್ಥನೀಯ. ೧೯೯೨ ರಲ್ಲಿ ನಡೆದ ಬಾಬ್ರಿ ಮಸೀದಿಯ ಘಟನೆ ಭೈರಪ್ಪನವರಿಗೆ ನೆನಪಿದೆ. ಆದರೆ ಇತ್ತೀಚೆಗೆ ೨೦೦೨ ರಲ್ಲಿ ಗುಜರಾತಿನಲ್ಲಿ ಸರ್ಕಾರದ ಪ್ರೋತ್ಸಾಹದಿಂದಲೇ

ನಡೆದ ನರಮೇಧ ಅವರು ೨೦೦೪ ರಲ್ಲಿ ನಡೆಸಿದ ಸತ್ಯಾನ್ವೇಷಣೆಯ ಸಮಯದಲ್ಲಿ ಅವರ ನೆನಪಿನಿಂದ ಮರೆಯಾಗಿದೆ. ನಿಜ ಸುಳ್ಳುಗಳ ಸಮಸ್ಯೆಯು ಈ 'ಆವರಣ'ದಲ್ಲಿ ಸಮೂಹ ಮಟ್ಟದಲ್ಲಿ ಇಡೀ ರಾಷ್ಟ್ರಮಟ್ಟದಲ್ಲಿ ಹೊರ ಹೊಮ್ಮಿದೆ ಎಂದು ಕಾದಂಬರಿಯನ್ನು ಬರದಾದನಂತರ ಅನ್ನಿಸುವ ಇವರಿಗೆ ಇಷ್ಟು ಕಾಲದಲ್ಲಿ ರಾಷ್ಟ್ರಮಟ್ಟದಲ್ಲಿ ನಡೆದ ದುರಂತಗಳನ್ನು ಭಯಾನಕ ಸನ್ನಿವೇಶಗಳನ್ನು ಕುರಿತು ಕಿಂಚಿತ್ತಾದರೂ ಯೋಚನೆ ಮಾಡುವುದಿಲ್ಲ. ಸತ್ಯ ಎನ್ನುವುದು ನಿಜವಾಗಿಯೂ ಪೂರ್ತಿಯಾಗಿ, ಅದರ ಎಲ್ಲ ಮಗ್ಗುಲುಗಳ ಸಮೇತ ಅನಾವರಣಗೊಳ್ಳಬೇಕಾದರೆ ಕೇವಲ ಅರ್ಧ ಸತ್ಯಗಳನ್ನು ಹೇಳಿ ಜನರನ್ನು ಮರಳು ಮಾಡುವುದೋ, ಅಥವಾ ಈಗಾಗಲೇ ಕಲುಷಿತಗೊಂಡ ಮನಸ್ಸುಗಳನ್ನು ರುಚ್ಚಿಗೆಬ್ಬಿಸುವುದೋ ಆಗಬಾರದು. ಬದಲಾಗಿ, ಒಬ್ಬ ಕಲಾವಿದ, ಇತಿಹಾಸಕಾರ, ಮುಖ್ಯವಾಗಿ ಒಬ್ಬ ಮನುಷ್ಯ ತನ್ನ ನೈತಿಕ ಜವಾಬ್ದಾರಿಯನ್ನರಿತು ಈ ಸತ್ಯಗಳನ್ನು ಕುರಿತು ಮಾತನಾಡಬೇಕಾಗುತ್ತದೆ. 'ಆವರಣ' ಕಾದಂಬರಿಯು ಇದರ ವಿರುದ್ಧ ದಿಕ್ಕಿನಲ್ಲಿ ನಡೆದಿದೆ.

ಸಂಘಪರಿವಾರದ ಯೋಚನೆಯನ್ನೇ ತಲೆಯಲ್ಲಿ ಹೊತ್ತಿರುವ ಭೈರಪ್ಪನವರು ಪ್ರಗತಿಪರರನ್ನು ಕಮ್ಯುನಿಷ್ಟರನ್ನು ಹಳಿಯಲು ಏನೆಲ್ಲ ಉಪಾಯಗಳನ್ನು ಹುಟ್ಟುಹಾಕಿದ್ದಾರೆ. ಪ್ರೊಫೆಸರ್ ಶಾಸ್ತ್ರಿ ಒಬ್ಬ ಪ್ರಗತಿಪರ, ಮಾರ್ಕ್ಸ್ ಬುದ್ಧಿಜೀವಿ, ಲಂಪಟ, ಅಪ್ರಾಮಾಣಿಕ. ಹಣಕ್ಕಾಗಿ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ವ್ಯವಸ್ಥೆಗೆ ಹತ್ತಿರವಾಗಲು ಯತ್ನಿಸುವವನು. ತಾನು ಎದುರಿಸುವ ಮಾತುಗಳಲ್ಲಿ, ಸಿದ್ಧಾಂತಗಳಲ್ಲಿ ನಂಬಿಕೆ ಇಲ್ಲದವನು. ಶಾಸ್ತ್ರೀಯೇ ಅಲ್ಲ, ಕಾದಂಬರಿಯಲ್ಲಿ ಬರುವ ಯಾವ ಪ್ರಗತಿಪರನೂ ಪ್ರಾಮಾಣಿಕನಲ್ಲ. ಇದೆಲ್ಲ ಪ್ರಗತಿಪರತೆಯನ್ನು ಜಾತ್ಯಾತೀತತೆಯನ್ನು ಟೀಕಿಸುವರಿಗೆ ಸರಿಯಾಗಿದೆ.

ಹಿಂದೂಗಳಲ್ಲಿ ಮನೆಮಾಡಿರುವ ಎಲ್ಲ ಅನಿಷ್ಟಗಳಿಗೂ ಮುಸ್ಲಿಮರೇ ಕಾರಣ. ಸತಿ ಪದ್ಧತಿ, ಪರದಾ, ಜಾತಿಪದ್ಧತಿ ಎಲ್ಲವೂ ಅವರಿಂದಲೇ. 'ಉತ್ತರ ಭಾರತದಲ್ಲಿ ಇಂದಿಗೂ ಇರುವ ರಾತ್ರಿಯ ವೇಳೆ ಮದುವೆ ಮಾಡುವ ಪದ್ಧತಿಗೂ ಮುಸ್ಲಿಮರೇ ಕಾರಣ. ಈ ಮಾತನ್ನು ಹೇಳುವ ಲಕ್ಷ್ಮಿಗೆ ಇದೇ ಪದ್ಧತಿ ಆಂಧ್ರದಲ್ಲಿಯೂ ಈಗಲೂ ಇದೆ ಎನ್ನುವುದು ಗೊತ್ತಿಲ್ಲ.

ಭೈರಪ್ಪನವರಾದರೂ ತಮ್ಮ ಅಗಾಧ ಸಂಶೋಧನೆಯಿಂದಲೇ ಈ ವಿಷಯವನ್ನು ಕಂಡುಹಿಡಿದು, ಆಂಧ್ರದಲ್ಲಿಯೂ ಮುಸ್ಲಿಂ ಆಳ್ವಿಕೆಯೇ ಅದಕ್ಕೆ ಕಾರಣವೆಂದು ಲಕ್ಷ್ಮಿಗೆ ತಿಳಿಸಬೇಕಾಗಿತ್ತು. ಆದರೆ ಆ ಗೋಜಿಗೆ ಭೈರಪ್ಪನವರು ಹೋಗೇ ಇಲ್ಲ.

ಈ ಕೃತಿಯಲ್ಲಿ ಅವರು ಸಂಘಪರಿವಾರದ ಮುದ್ರಯೊತ್ತಲ್ಪಟ್ಟ ಹಿಂದೂತ್ವದ ಪ್ರಚಾರಕರಾಗಿ ಗುರುತಿಸಿಕೊಳ್ಳಲು ಅತ್ಯಂತ ಸಂತೋಷವಾಗಿ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ. ಹೀಗಾಗಿ ತಮ್ಮದೇ ಆದ ವಾದ ಸರಣಿಯ ಮೇರೆಗೆ ಭೈರಪ್ಪನವರು ಕಲೆಗೆ ದ್ರೋಹ ಮಾಡಿದ್ದಾರೆ. ಏಕೆಂದರೆ 'ಆವರಣ'ದಲ್ಲಿ ಲಕ್ಷ್ಮಿ ಹೇಳುತ್ತಾಳೆ "ಕಲೆಯನ್ನು ಬೇರೆ ಯಾವ ಉದ್ದೇಶಕ್ಕೆ ದುಡಿಸಿಕೊಳ್ಳುವುದೂ ಕಲೆಗೆ ಎಸಗುವ ದ್ರೋಹ"

ಸಂಘಪರಿವಾರದವರ ಹಂದರದ ಮೇಲೆ ಯಾವುದೇ ಭಾವನೆಗಳಿಗೊಳಗಾಗದೆ ಕೇವಲ ಚರ್ಚೆ ಮತ್ತು ನಿರಂತರ ಚರ್ಚೆ ಮಾಡುತ್ತಿರುವ ದುರ್ಬಲ ಪಾತ್ರಗಳ ಬಾಯಿಂದ ಇತಿಹಾಸವೆನ್ನುವ ವಿಷಯದ ಬಗ್ಗೆ ತಮ್ಮದೇ ಆದ ನ್ಯಾಯ ನಿರ್ಣಯವನ್ನು ನೀಡುತ್ತಾ ಅಲ್ಲಲ್ಲಿ ಕಾದಂಬರಿ, ಕಲಾತ್ಮಕತೆ ಎನ್ನುವ ನುಡಿಗಟ್ಟನ್ನು ಉದುರಿಸುತ್ತಾ; ಸತ್ಯದ ಸೆರಗಿನಲ್ಲಿ ಅವಿತುಕೊಳ್ಳುತ್ತಾ ಅಸತ್ಯದ ಕತ್ತಲಿನಲ್ಲಿ ತಡಕಾಡುತ್ತ ಕಲೆಗೆ ಎಸಗಿರುವ ದ್ರೋಹವಾಗಿದೆ ಹಾಗೂ ಕಲೆಗೆ ಮಾತ್ರವಲ್ಲದೆ ತಮಗೆ ತಾವೇ ಆತ್ಮದ್ರೋಹವೆಸಗಿಕೊಳ್ಳುತ್ತಿದ್ದಾರೆ. ಅವರ ವಿಶ್ಲೇಷಣೆಯ ಪ್ರಕಾರವೇ ಅವರು 'ಆವರಣ'ದಲ್ಲಿ ಕಲಾವಿದರಾಗಿ, ಸಾಹಿತಿಯಾಗಿ, ಸೃಜನಶೀಲ ಲೇಖಕರಾಗಿ ಉಳಿದಿಲ್ಲ.

ಭೈರಪ್ಪನವರು ಇತಿಹಾಸ, ಕಲಾವಿದ, ಸಾಹಿತ್ಯ, ಸಂಶೋಧನೆ ಮೊದಲಾದ ಶಬ್ದಗಳ ಜಾಲವನ್ನು ಹೆಣೆಯುತ್ತಾ 'ಸತ್ಯಕ್ಕೆ' ಬಹಳ ಹೆಚ್ಚಿನ ಮಹತ್ವವನ್ನು ನೀಡಿದ್ದಾರೆ. ಇತಿಹಾಸದ ಸತ್ಯದಲ್ಲಿ ಕಲೆಯ ಭಾವವು ಪ್ರವಿಸಿದ್ದರೆ ಆ ಮಟ್ಟಿಗೆ ಇದು ಸಾಹಿತ್ಯವಾಗಿ ಸಫಲವಾಗಿದೆ ಎಂದು ಒಂದೆಡೆ ವಿನೀತಭಾವವನ್ನು ಅವರು ತೋರಿಕೊಂಡರೂ 'ಆವರಣ' ಸಾಹಿತ್ಯ ಕೃತಿಯಲ್ಲಿ ಎಂಬ ಅಳುಕು ಅವರಿಗೆ ಇದ್ದಿರಬೇಕು ಎಂದು ಅನಿಸುತ್ತದೆ. ಹೀಗಾಗಿ ಆರಂಭದಿಂದಲೇ ಅವರು ಕಲಾತ್ಮಕವಲ್ಲದ, ಸಾಹಿತ್ಯಕವಲ್ಲದ ಅವರ ಕೃತಿಯ ಬಗ್ಗೆ ಸತ್ಯ ಹೆಸರಿನಲ್ಲಿ ಸಮರ್ಥನೆ ಮತ್ತು ವಿವರಣೆಗಳನ್ನು ನೀಡುತ್ತಾ ರಕ್ಷಣೆ ಪಡೆಯುವ ವಿಫಲ ಯತ್ನವನ್ನು ಮಾಡಿದ್ದಾರೆ.

ಐತಿಹಾಸಿಕ ವಸ್ತುವನ್ನು ಸಾಹಿತ್ಯವಾಗಿ ಪರಿವರ್ತಿಸುವಾಗಲಂತೂ ಸಾಹಿತಿಗೆ ಸತ್ಯದ ಬಗ್ಗೆ ಅರಿವು ಇರಲೇಬೇಕು ಎಂಬ ಜವಾಬ್ದಾರಿಯು ನನ್ನಂಥ ಎಂ.ಫಿಲ್. ವಿದ್ಯಾರ್ಥಿಗೆ ಎಚ್ಚರಿಸಿದೆ. ಸಂಶೋಧನೆ ಮಾಡದೆಯೂ ಸಮಕಾಲಿನ ವಸ್ತುವನ್ನು ಕುರಿತು ಸಾಹಿತ್ಯ ರಚಿಸಬಹುದು. ಆದರೆ ಐತಿಹಾಸಿಕ ವಸ್ತುವನ್ನು ಆಧರಿಸಿ ಬರೆಯುವಾಗ ಪ್ರತಿಯೊಂದು ವಿವರಕ್ಕೂ ಸಂಶೋಧನೆಯ ಅಗತ್ಯವಿದೆ ಎಂದನಿಸುತ್ತದೆ.

ಸಾಹಿತಿಯ ಹೊಣೆ ಇರುವುದು ತಾನು ಬರೆಯುವ ವಸ್ತುವಿನ ಇತಿಹಾಸದ ಸತ್ಯಕ್ಕೆ. ಸತ್ಯ ಮತ್ತು ಸೌಂದರ್ಯಗಳಿಗೆ ತೋಲನವುಂಟಾದಾಗ ಸಾಹಿತಿಯ ಅಂತಿಮ ನಿಷ್ಠೆ ಇರಬೇಕಾದದ್ದು ಸತ್ಯಕ್ಕೆ.

ಆದರೆ ವರ್ತಮಾನವು ಕಣ್ಣಿಗೆ ಕಾಣುವಂತೆ ರಾಚಿದಾಗಲೂ ಅದನ್ನು ಬೇಕೆಂತಲೇ ಗುರುತಿಸದೆ ತಮ್ಮ ತಟ್ಟೆಯಲ್ಲಿ ಬಿದ್ದಿರುವ ಹೆಗ್ಗಣಗಳನ್ನು ಗಮನಿಸದೆ ಬೇರೆಯವರ ತಟ್ಟೆಯಲ್ಲಿರುವ ನೊಣವನ್ನು ಭೂತಗನ್ನಡಿಯಲ್ಲಿ ಕಾಣುವ ಮನುಷ್ಯಸ್ವಭಾವವೊಂದಿದೆ. ಇಂತಹ ಸ್ವಭಾವ ವೈಚಿತ್ರ್ಯಕ್ಕೆ ಗುರಿಯಾಗಿ ಲೇಖಕರು ಕೂಡ ಕಾಮಾಲೆ ಕಣ್ಣಿನಿಂದ ನೋಡಿ ಇತಿಹಾಸವನ್ನು ತಿರುಚಿ ಬರೆದಿರುವ ಸಾಧ್ಯತೆಯಿದೆ. ಸಾವಿರಾರು ವರ್ಷಗಳ ಹಿಂದಿನ ಸ್ವಜಾತಿಯವರು ಮಾಡಿದ ತಪ್ಪಿಗೆ ಇಂದಿನವರು ಕ್ಷಮೆ ಕೇಳಬೇಕೆಂಬ ಉದ್ದಂಡತನದ ವಾದವನ್ನು ಯಶಸ್ವಿಯಾಗಿ ಮುಂದಿಡುವ ಲೇಖಕರು, ಓದುಗನು ಹೇಗಿರಬೇಕೆಂದು ಅಪ್ಪಣೆ ಕೊಡಿಸುತ್ತಾರೆ.

ಲಕ್ಷ್ಮಿಗೆ ಭೈರಪ್ಪನವರು ದೆಹಲಿಯ ಸಭೆಯಲ್ಲಿ ಹೇಳುವುದಾದರೂ ಏನನ್ನು? "ತಮ್ಮ ಪೂರ್ವಿಕರೆಂದು ಭಾವಿಸುವವರ ಸರಿ ತಪ್ಪುಗಳನ್ನು ವಿಶ್ಲೇಷಿಸಿ ತಮ್ಮ ಜೀವನ ಮಾರ್ಗವನ್ನು ರೂಪಿಸಿಕೊಳ್ಳಲು ಇತಿಯಾಸದ ಅಧ್ಯಯನ ಸಹಾಯ ಮಾಡಬೇಕು ಅದಕ್ಕೆ ಸತ್ಯಕ್ಕೆ ಬಣ್ಣ ಕಟ್ಟದೆ ಮುಖಾಮುಖಿಯಾಗುವ ಪ್ರಾಮಾಣಿಕತೆಬೇಕು. ಹಿಂದಿನ ಮುಸ್ಲಿಮರು, ಮುಸ್ಲಿಮ್ ದೊರೆಗಳು ಮಾಡಿದ್ದಕ್ಕೆ ಇಂದಿನ ಮುಸ್ಲಿಮರು ಹೊಣೆಯಲ್ಲ ನಿಜ. ಆದರೆ ತಮ್ಮ ಹಿಂದಿನವರು ಮಾಡಿದ ತಪ್ಪುಗಳನ್ನು ಪ್ರಾಂಜಲವಾಗಿ ಅರಿತು ಒಪ್ಪಿಕೊಳ್ಳುವ ಹೊಣೆಗಾರಿಕೆ ಬೇಡವೆಂದರೆ ಆ ತಪ್ಪುಗಳನ್ನು ತಾವು ಸಮರ್ಥಿಸುತ್ತೀವಿ ಅಂತಲೇ ಅರ್ಥ.

'ಆವರಣ'ವೆಂಬುದು ನಿಜವಾದ ಅರ್ಥದಲ್ಲಿ ಸಂಘಪರಿವಾರದವರು ಮುಸ್ಲಿಮರ ಇತಿಹಾಸ ಮತ್ತು ವರ್ತಮಾನಗಳ ಮೇಲೆ ಆರಂಭಿಸಿದ ದಾಳಿಯ ಮುಂದುವರೆದ ಭಾಗವಾಗಿದೆ ಎಂದು ಅನಿಸುತ್ತದೆ. ಮುಸ್ಲಿಮರ ಪರವಾಗಿ ನಿಲ್ಲುವ ಪ್ರತಿಯೊಬ್ಬರ ಮೇಲೆಯೂ ಗೂಬೆ ಕೂರಿಸುವ ಕೆಲಸ ಮಾಡಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ವಿ. ಎಸ್. ಶ್ರೀಧರ 'ಹೇಸಿಗೆಯ ಸ್ವಾತಂತ್ರ್ಯಕ್ಕೆ' ಚಿನ್ನದ ಮುಖವಾಡ, ಸಂ. : ಗೌರಿ ಲಂಕೇಶ್, 'ಆವರಣ' ಎಂಬ ವಿ-ಕೃತಿ, ೨೦೦೭. ಲಂಕೇಶ ಪ್ರಕಾಶನ, ಬೆಂಗಳೂರು. ಪುಟ ೧೦೯.
೨. ಅದೇ, ಪುಟ ೧೧೦.

## ಅಧ್ಯಾಯ ೬

# ರಾಷ್ಟ್ರೀಯ ಭಾವೈಕ್ಯ ಸಮಾವೇಶದಲ್ಲಿ ಲಕ್ಷ್ಮಿಯ ಪ್ರತಿಕ್ರಿಯೆ

ಹಿಂದೂ ಮುಸ್ಲಿಮರಲ್ಲಿ ಸೌಹಾರ್ದ ಬೆಳೆಸುವ ಉದ್ದೇಶ ಉದಾತ್ತವಾದದ್ದು. ಇದು ಅಗತ್ಯ ಕೂಡ. ಆದರೆ ಸುಳ್ಳಿನ ಸರಪಳಿಯ ಮೇಲೆ ಗಟ್ಟಿ ಸಮಾಜ ಕಟ್ಟುವುದಕ್ಕೆ ಸಾಧ್ಯವಿಲ್ಲ. ವರ್ಷಕ್ಕೆ ಎಪ್ಪತ್ತೈದು ಲಕ್ಷ ಯಾತ್ರಿಗಳಾದರೂ ಕಾಶಿಗೆ ಹೋಗುತ್ತಾರೆ. ತಾವು ಪರಮ ಭಕ್ತಿಯಿಂದ ಕಲ್ಪಿಸಿಕೊಂಡು ಬಂದಿದ್ದ ವಿಶ್ವನಾಥ ಮಂದಿರವೆಂಬುದು ಅಸ್ತಿತ್ವದಲ್ಲೇ ಇಲ್ಲದಿರುವುದು, ಆ ಸ್ಥಳದಲ್ಲಿ ಇಡೀ ಕಾಶಿಯ ನೋಟವನ್ನು ಆಕ್ರಮಿಸಿರುವ ಮಸೀದಿ ವಿಜೃಂಭಿಸುತ್ತಿರುವುದನ್ನು ನೋಡಿ ಆಘಾತಗೊಳ್ಳುತ್ತಾರೆ. ಇವು ಬರೀ ಕಾಶಿ, ಮಥುರಾ ಅಯೋಧ್ಯಗಳ ಉದಾಹರಣೆಗಳಲ್ಲ. ಭಾರತದಲ್ಲಿ ಇಂಥ ಸುಮಾರು ಮೂವತ್ತು ಸಾವಿರ ಭಗ್ನ ಮಂದಿರಗಳಿವೆ ಎಂದು ಸಂಶೋಧಕರು ಎಣಿಸಿದ್ದಾರೆ. ಈ ಭಗ್ನಾವಶೇಷಗಳೆಲ್ಲ ಕಾಡು ಪ್ರಾಣಿಗಳಿಂದ ಆದವು ಅಂತ ಸಾಧಿಸುತ್ತೀರಾ? ಜೈನರು, ಬೌದ್ಧರು ಶೈವರು ವೈಷ್ಣವರು ಪರಸ್ಪರ ಮಂದಿರಗಳನ್ನು ಒಡೆದರು ಅಂತ ಕತೆ ಕಟ್ಟುತ್ತೀರಾ? ಈ ಪಂಥಗಳ ಧರ್ಮಗ್ರಂಥಗಳೂ ಇನ್ನೊಬ್ಬರ ಮಂದಿರ ವಿಗ್ರಹಗಳನ್ನು ಒಡೆಯುವಂತೆ ಹೇಳಿಲ್ಲ, ಅಪರೂಪಕ್ಕೆ ಯಾವನಾದರೂ ಪುಂಡ ಈ ಕೆಲಸ ಮಾಡಿದರೆ ಅವನನ್ನು ತಮ್ಮ ಪಂಥದ ಮಾದರಿ ಅಂತ ಪರಿಗಣಿಸಿಲ್ಲ, ಆದರೆ ಪರಧರ್ಮೀಯರ ಪೂಜಾ ಸ್ಥಳ ಪೂಜಾಮೂರ್ತಿಗಳನ್ನು ಒಡೆಯುವುದು, ಕತ್ತಿಹಿಡಿದು ಧರ್ಮಾಂತರಿಸಿಕೊಳ್ಳುವುದು, ಸೋತವರನ್ನು ಸಾವಿರಗಟ್ಟಲೆ ಗುಲಾಮರಾಗಿ ಒಯ್ಯುವುದು ಇವೆಲ್ಲ ಆ ಧರ್ಮ ಸ್ಥಾಪಕರೇ ಮಾಡಿ ಮಾದರಿ ಹಾಕಿಕೊಟ್ಟಿರುವ ಮೂಲ ಗುಣ. ಯಾವುದೋ ಅನಾಗರಿಕ ಕಾಲದಲ್ಲಿ ಅನಾಗರಿಕ ದೇಶದಲ್ಲಿ ಮಾಡಿದ ಕೃತ್ಯ, ನಂಬಿಕೆಗಳನ್ನು ಇವತ್ತು ನಂಬಿ ಅನುಸರಿಸುವ ಮನೋಭಾವ ಇರುವ ತನಕ ಹಾಗೂ ಪ್ರೊ. ಶಾಸ್ತ್ರಿಯವರಂಥ ಕಿಡಿಗೇಡಿಗಳು ಇರುವತನಕ ಭಾವೈಕ್ಯ ಹೇಗೆ ಸಾಧ್ಯ?

ಎಲ್ಲ ಸಾಮಾಜಿಕ ರೋಗಗಳಿಗು ಹಿಂದೂ ಧರ್ಮವೇ; ಧರ್ಮಾಚರಣೆಗಳೇ ಕಾರಣ ಎಂದು ಮಳೆಗಾಲದ ಕಪ್ಪೆಗಳಂತೆ ವಟಗುಟ್ಟುವ ನಮ್ಮ ಬುದ್ಧಿಜೀವಿಗಳಿಗೆ ನಿಜವಾದ ಇತಿಹಾಸ ಗೊತ್ತಿಲ್ಲ ಅನಿಸುತ್ತದೆ. ದೇಶದ ಸಂಪತ್ತನ್ನೆಲ್ಲ ತಮ್ಮ ತಮ್ಮ ಜನಾಂಗವನ್ನು ವಿಸ್ತರಿಸಿಕೊಂಡು ಭೋಗ ಜೀವನದಲ್ಲಿ ಮೈಮರೆಯುತ್ತಾ, ದೇಶದ ಬಹು ಸಂಖ್ಯೆಯ ಸ್ಥಳಿಯ ಧರ್ಮೀಯರನ್ನು ದರ್ಮಾಂತರಗೊಳಿಸುತ್ತ, ಅವರ ಗುಡಿ ಗೋಪುರಗಳನ್ನಲ್ಲದೆ ನಳಂದ, ತಕ್ಷಶಿಲಾ ಓದಂತಪುರಗಳಂಥ ಜ್ಞಾನಕೇಂದ್ರಗಳ ಮೇಲ ದಾಳಿ ಮಾಡಿ

ವಿದ್ವಾಂಸರುಗಳನ್ನು ಕೊಚ್ಚಿಕೊಂಡು ಪುಸ್ತಕ ಭಂಡಾರಗಳನ್ನು ಬೆಂಕಿಗೆ ಹಾಕಿ ಸುಡುವುದರಲ್ಲಿ ನಿರತರಾಗಿರಲಿಲ್ಲವೆ? ಭಾರತ ಹಿಂದುಳಿದಿರುವುದಕ್ಕೆ ಯಾವುದೋ ಕಾಲದ ಧರ್ಮಶಾಸ್ತ್ರಕಾರರನ್ನೆ, ಅತೀ ಪ್ರಾಚೀನ ಕಾಲದ ವೇದೋಪನಿಷತ್ತುಗಳನ್ನು ಬಯ್ಯುವ ಸುಳ್ಳು ಇತಿಹಾಸವನ್ನು ಪ್ರಚಾರ ಮಾಡುವ ಬದಲು ಒಂದು ಸಾವಿರ ವರ್ಷದಿಂದ ಈ ದೇಶವನ್ನು ನಿರ್ವೀರ್ಯಗೊಳಿಸುತ್ತ ಬಂದವರನ್ನೇ ಹೆಸರಿಸುವುದಿಲ್ಲ? ಭೈರಪ್ಪನವರು ಇಷ್ಟಿಲ್ಲ ಆಳವಾದ ಅಧ್ಯಯನ ಸಂಶೋಧನೆ, ಸತ್ಯಾನ್ವೇಷಣೆಗಳ ನಂತರ ತಲುಪಿರುವ ಈ ತೀರ್ಮಾನಗಳಲ್ಲಿ ಹೊಸದು ಏನೂ ಇಲ್ಲ ಎಂದೆನಿಸುತ್ತದೆ. ಹುಟ್ಟಿದಾಗಿನಿಂದಲೂ ಯಾವ ಅಧ್ಯಯನದ ಗೊಡವೆಯೂ ಇಲ್ಲದೆ ಸಂಘಪರಿವಾರ ಪ್ರತಿಪಾದಿಸುತ್ತಾ ಬಂದ ಒಟ್ಟೂ ತತ್ವಗಳ ಜೀವಾಳ ಇದೇ ಅಲ್ಲವೆ?

ಲಕ್ಷ್ಮಿಯ ರಾಷ್ಟ್ರೀಯ ಭಾವೈಕ್ಯ ಸಮಾರಂಭದಲ್ಲಿ ಶಾಸ್ತ್ರಿಗಳ ಜೊತೆ ವಾದ ಮಂಡಿಸಲು ಪ್ರಾರಂಭಿಸಿದಳು : ಸರ್, ನೀವು ಬನಾರಸ್ ನೋಡಿದಿರಾ? ಎಂದು ಕೇಳಿದಳು. ಪ್ರೊಫೆಸರ್ ತಬ್ಬಿಬ್ಬಾದರು. ಇಡೀ ಸಭೆ ಚಕಿತವಾಯಿತು ಈ ಪ್ರಶ್ನೆಯ ಇಂಗಿತ ಏನು ಎಂದು ಶಾಸ್ತ್ರಿಗಳು ಆತ್ಮವಿಶ್ವಾಸದಿಂದ ಕೇಳಿದರು. ವಿಶ್ವನಾಥ ದೇವಾಲಯವಿದ್ದ ಜಾಗದಲ್ಲಿ ಒಂದು ಭಾರಿ ಮಸೀದಿ ಇದೆ. ಗ್ಯಾನವ್ಯಾಪಿ ಮಸೀದಿ ಅಂತ ಸ್ಥಳೀಯ ಮುಸ್ಲಿಮರೇ ಅದನ್ನು ಕರೀತಾರ. ಅದರ ಹಿಂಬದಿಯಲ್ಲೊಂದು ಕಿರುಮಂಟಪವನ್ನು ವಿಶ್ವನಾಥ ಮಂದಿರ ಅಂತ ಮಾಡಿಕೊಂಡು ಭಕ್ತರು ಪೂಜೆ ಮಾಡುತ್ತಾರೆ. ಮಸೀದಿ ಕಟ್ಟಿಸಿದವರಾರು? ಅದನ್ನು ಅದೇ ಜಾಗದಲ್ಲಿ ಕಟ್ಟಿಸಿದ್ದಾದರೂ ಯಾಕೆ? ಕೊಚ್ಚಿ ಹರಿಯುವ ಮಾತಾಡುವ ಮೊದಲು ಇಂಥ ಹತ್ತಿಪ್ಪತ್ತು ಮೂವತ್ತು ಸಾವಿರ ಅವಶೇಷಗಳಿಗೆ ಉತ್ತರ ಹೇಳಬೇಕಾಗುತ್ತೆ ಅವಳ ಧ್ವನಿಯಲ್ಲಿ ಉದ್ವೇಗವಿತ್ತು.

ಎಲ್ಲೋ ಒಂದು ಖಾಲಿ ಜಾಗದಲ್ಲಿ ಮಸೀದಿ ಕಟ್ಟಿಕೊಂಡರೆ ಅದನ್ನು ಔರಂಗಜೇಬ ಕಟ್ಟಿಸಿದ ಅಂತ ಒಪ್ಪಿಕೊಂಡರೂ, ಹಿಂದೂ ಮಂದಿರವನ್ನು ಒಡೆದು ಕಟ್ಟಿಸಿದ ಅಂತ ಹೇಳುವುದು ಆಧಾರಹೀನ, ಅವೈಜ್ಞಾನಿಕ ಹೇಳಿಕೆಯಾಗಲ್ಲವೆ? ಪ್ರೊಫೆಸರರು ಕೇಳಿದರು. ಔರಂಗಜೇಬನು ೧೭೦೭ ರಲ್ಲಿ ಸತ್ತನಂತರ ಅವನ ಕೊನೆಯ ಮುಖ್ಯಾಧಿಕಾರಿ ಇನಾಯತುಲ್ಲಾಖಾನ್ ಕಾಶ್ಮೀರಿಯ ಒತ್ತಾಯದ ಮೇರೆಗೆ ಸಾಕಿ ಮುಸ್ತಾಕ್‌ಖಾನ್ ಎಂಬುವನು ಅವರ ಆದರ್ಶದ ದೊರೆ ಔರಂಗಜೇಬನ ಆಳ್ವಿಕೆಯ ಇತಿಹಾಸ ಬರೆದ. ಆ ಸ್ಥಾನದಲ್ಲಿದ್ದ ದಾಖಲೆಗಳ ಆಧಾರವಿಲ್ಲದೆ ಅವನು ಒಂದು ವಾಕ್ಯವನ್ನೂ ಬರೆದಿಲ್ಲ.[೧]

ಆ ಗ್ರಂಥದ ಹೆಸರು ಮಾಸಿರ್–ಇ–ಆಲಮ್‌ಗಿರಿ ಅಂತ. ೧೬೬೯ ರಲ್ಲಿ ಬಾದಶಾಹರ ಅಪ್ಪಣೆಯ ಮೇರೆಗೆ ಅವರ ಅಧಿಕಾರಿಗಳು ಕಾಶಿ ವಿಶ್ವನಾಥ ಮಂದಿರವನ್ನು ನಾಶಮಾಡಿದವರೆಂಬ ವರದಿ ಬಂತು ಅಂತ ಅದರಲ್ಲಿ ಬರೆದಿದೆ ಎಂದು ಲಕ್ಷ್ಮಿ ದಾಖಲೆಯ ಸಮೇತ ತೋರಿಸುತ್ತಾಳೆ. ಮತ್ತು–೧೬೭೦ ರಲ್ಲಿ ರಮಜಾನ್ ತಿಂಗಳ ಪವಿತ್ರ ಕರ್ತವ್ಯವಾಗಿ ಮಥುರಾ ದೇವಾಲಯವನ್ನು ನಾಶಮಾಡಲು ಔರಂಗಜೇಬನು ಹುಕುಂ ಮಾಡಿದ. ಅದೇ ಜಾಗದಲ್ಲಿ ಒಂದು ದೊಡ್ಡ ಮಸೀದಿಯನ್ನು ಕಟ್ಟಿದ ಅಂತ ಅದೇ ಪುಸ್ತಕದ ಮುಂದಿನ ಅಧ್ಯಾಯದಲ್ಲಿ ಬರೆದಿದೆ. ಮಥುರೆಯ ಮಂದಿರದ ಧ್ವಂಸವಾದದ್ದು ಬಾದಶಾಹನ ಆಳ್ವಿಕೆಯ ಹನ್ನೆರಡನೆಯ ವರ್ಷದಲ್ಲಿ, ಮಥುರೆಯ ಮಂದಿರದ ಧ್ವಂಸವಾದದ್ದು ಹದಿಮೂರನೆಯ ವರ್ಷದಲ್ಲಿ. ಈ ಐತಿಹಾಸಿಕ ಆಧಾರವನ್ನು ನಾನು ಸಭೆಯ ಗಮನಕ್ಕೆ

ತರಬಯಸುತ್ತೀನಿ ಎಂದಳು. ಆದರೆ ಪಾಪ ಲಕ್ಷ್ಮಿಗೆ ಅಲ್ಲಿ ಇರುವವರೆಲ್ಲರೂ ಕೋಡಂಗಿಗಳೇ ಎಂದು ಗೊತ್ತಿರಲಿಲ್ಲ ಕಾಣುತ್ತೆ. ಅರ್ಥಾತ್ ಪ್ರೊಫೆಸರ್ ಚೇಲಾಗಳೇ ಇದ್ದರು.

ಲಕ್ಷ್ಮಿಯು ಆಧಾರ ಸಮೇತ ಮುಸ್ಲಿಮರು ಎಂತಹ ಕೃತ್ಯ ಗೈದಿದ್ದಾರೆ ಎನ್ನುವುದನ್ನು ಸಭೆಯು ಗಮನಕ್ಕೆ ತಂದಾಗ ಸಭೆ ಸ್ತಬ್ಧವಾಯಿತು. ಇಂಥಹ ಅನೇಕ ಪ್ರಶ್ನೆಗಳು ಆ ಸಭೆಯಲ್ಲಿ ಎತ್ತಿದರೂ ಪ್ರಯೋಜಕಾರಿಯಾಗಲಿಲ್ಲ. ಯಾಕೆಂದರೆ ಅಲ್ಲಿರುವವರೆಲ್ಲ ಸರ್ಕಾರದ ಪರವಾಗಿದ್ದವರು, ಮಂತ್ರಿಗಳ ಪರವಾಗಿದ್ದವರು ಇದ್ದರು. ಹೀಗಾಗಿ ಕೊನೆಗೆ ಲಕ್ಷ್ಮಿಗೆ ಅನಿಸಿದ್ದು ಅದು ಮಾರ್ಕ್ಸಿಸ್ಟ್ ಗಡ್ಡವೋ ಆಧುನಿಕ ಮುಸ್ಲಿಂ ಗಡ್ಡವೋ ಎಂಬುದನ್ನು ವಿಂಗಡಿಸಿ ಗ್ರಹಿಸುವುದು ಅವಳಿಗೆ ತಕ್ಷಣ ಸಾಧ್ಯವಾಗಲಿಲ್ಲ.[೨]

ಹೀಗೆಯೇ ವಾದಗಳನ್ನು ಮಂಡಿಸಿದರೆ ಸಭೆಯು ಅವಧಿಯು ಇಡೀ ಮೂರು ದಿನವು ಮಾತನಾಡುವಷ್ಟು ವಿಷಯ ತನ್ನಲ್ಲಿದೆ ಎಂಬ ವಿಶ್ವಾಸ ಹುಟ್ಟಿತು ತಾನು ಯಾವ ಟಿಪ್ಪಣಿಯನ್ನೂ ತಂದಿಲ್ಲ. ಸಂದರ್ಭ ಗ್ರಂಥವನ್ನೂ ತಂದಿಲ್ಲ. ಈ ಸಭೆಯ ಒಳ ಉದ್ದೇಶವೇ ತನಗೆ ಗೊತ್ತಿರಲಿಲ್ಲ. ಗೊತ್ತಿಲ್ಲದಿದ್ದರೂ ಪರವಾಗಿಲ್ಲ. ತನ್ನ ಅಪ್ಪ ಮೂರುದಶಕ ಓದಿ ಮಾಡಿದ ಟಿಪ್ಪಣಿ, ತಾನು ಐದು ವರ್ಷ ಓದಿ ಗ್ರಹಿಸಿದ ಸಂಗತಿಗಳಲ್ಲಿ ಬಹುಭಾಗ ನೆನಪಿನಲ್ಲಿ ಎಂಬ ಧೈರ್ಯ ಬಂತು. ಸಮಿತಿಯು ಸದಸ್ಯರನ್ನೆಲ್ಲ ಒಮ್ಮೆ ಸ್ಪಷ್ಟವಾಗಿ ನೋಡಿದರೆ ಅವರೆಲ್ಲರಿಗೂ ತಾನು ಅವರನ್ನು ಗ್ರಹಿಸಿದ್ದೇನೆಂಬ ಭಾನೆ ಮೂಡಿ ತನ್ನ ಧೈರ್ಯ ವರ್ಧಿಸುತ್ತದೆ ಎನ್ನಿಸಿತು. ಸ್ಪಷ್ಟ, ದಿಟ್ಟ ನೋಟವು ಕಾದಾಟದ ಒಂದು ಪರಿಣಾಮಕಾರಿ ವಿಧಾನವೆಂಬ ನೆನಪಾಯಿತು.

ಹೀಗೆ ಇನ್ನೂ ಅನೇಕ ಆಡಂಬರದ ರಾಷ್ಟ್ರೀಯ ಭಾವೈಕ್ಯ ಸಮಾರಂಭಗಳನ್ನು ತಮಗೆ ಅನುಕೂಲಕ್ಕೆ ತಕ್ಕಂತೆ; ಭೈರಪ್ಪನವರು ಏರ್ಪಡಿದ್ದಾರೆ. ಎಲ್ಲರೂ ಒಂದೇ ಅನ್ನುವ ಭಾವನೆ ಮೊದಲು ಭೈರಪ್ಪನವರಲ್ಲಿ ಇಲ್ಲ ಇನ್ನು ಭಾವೈಕ್ಯ ಎಲ್ಲಿಂದ ಬರಬೇಕು ಎಂಬ ಅನುಮಾನ ಸ್ಪಷ್ಟವಾಗಿ ತಿಳಿದು ಬರುತ್ತದೆ.

**ಕೊನೆ ಟಿಪ್ಪಣಿಗಳು**

೧. ಎಸ್. ಎಲ್. ಭೈರಪ್ಪ, 'ಆವರಣ' ೨೦೦೭. ಸಾಹಿತ್ಯ ಭಂಡಾರ, ಬೆಂಗಳೂರು, ಪುಟ ೨೩೦
೨. ಅದೇ, ಪುಟ: ೨೩೨.

## ಅಧ್ಯಾಯ ೭

## 'ಆವರಣ'ದಲ್ಲಿ ಭೈರಪ್ಪನವರ ಆಂತರಿಕ ನಿಲುವು

ಭೈರಪ್ಪನವರ ಎಲ್ಲ ತೀರ್ಮಾನಗಳ ಹಿಂದೆ ಸಂಶೋಧನೆ, ಅಧ್ಯಯನದ ನೆಲೆಗಟ್ಟಿದೆ, ಒಪ್ಪೋಣ, ಅದನ್ನು ಅವರು ಹೆಮ್ಮೆಯಿಂದ ಸಾರಿಕೊಳ್ಳುತ್ತಾರೆ ಕೂಡ. ಈ ಕಾದಂಬರಿಯ ಐತಿಹಾಸಿಕ ವಿಷಯದಲ್ಲಿ ನನ್ನ ಸ್ವಂತದ್ದು ಏನೂ ಇಲ್ಲ ಪ್ರತಿಯೊಂದು ವಿವರ ಅಥವಾ ನಡೆಗೂ ಇರುವ ಆಧಾರಗಳನ್ನು ಸಾಹಿತ್ಯದ ಕಲೆಯು ತಡೆದುಕೊಳ್ಳುವ ಮಟ್ಟಿಗೂ ಕಾದಂಬರಿಯ ಅಂಗವಾಗಿಯೇ ಅಳವಡಿಸಿದ್ದೇನೆ ಎಂದು ಮುನ್ನುಡಿಯಲ್ಲಿ ಅವರು ಹೇಳಿಕೊಂಡಿದ್ದಾರೆ. ಸರಿ, ಇದರಿಂದ ಅವರು ಏನು ಸಾಧಿಸಲು ಹೊರಟಿದ್ದಾರೆ ಎಂದು ತಿಳಿಯದು. 'ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗುವೂ ಅದರ ಮಗುವೂ ಯಾವುದೋ ಒಂದು ತಲೆಮಾರಿನ ಮಗುವು ನಮ್ಮ ದೇವಸ್ಥಾನವನ್ನು ಒಡೆದು ನಾಶಮಾಡುತ್ತೆ'[೧] ಎಂದು ಸಕಲರನ್ನೂ ಪ್ರೇಮದಿಂದ ಕಾಣುವ 'ಗಾಂಧಿವಾದಿ'ಯೊಬ್ಬ, ಹಲುಬುವುದೇ ಈ ಮಹತ್ಕೃತಿಯ ಘನಂದಾರಿ ಕೆಲಸವೆ? ಅಪ್ಪಟ ಗಾಂಧಿವಾದಿ ನರಸಿಂಹೇಗೌಡರಿಂದ ಈ ಮಾತುಗಳನ್ನಾಡಿಸಿದ್ದಾರೆ ಅಂದರೆ ಭೈರಪ್ಪನವರು ಇತಿಹಾಸ ತಿರುಚಿ ಬರೆಯಲು ಪ್ರಯತ್ನಿಸಿರಬಹುದು ಎಂದೆನಿಸುತ್ತದೆ.

ಇತಿಹಾಸ ರಚನೆ ಹಿಂದಿನ ರಾಜಕಾರಣದ ಈ ಪ್ರಶ್ನೆಗಳು ಕಾದಂಬರಿ ಬೆಳೆದಂತೆ ಇನ್ನಷ್ಟು ದೊಡ್ಡ ಪ್ರಶ್ನೆಗಳಿಗೆ ದಾರಿಯಾಗುತ್ತ ಹೋಗುತ್ತವೆ. ಯಾಕೆಂದರೆ ಭೈರಪ್ಪನವರ 'ಆವರಣ'ದಲ್ಲಿ ಕಾಣುವುದು 'ಆತ್ಮಸ್ತುತಿ, ಪರನಿಂದೆ'ಯ ಅಂದರೆ ಮುಸ್ಲಿಮರ ವಿರುದ್ಧ ಆಕ್ರಮಣ ಮತ್ತು ಹಿಂದುತ್ವದ ಉಗ್ರ ಸಮರ್ಥನೆಯ ಇಮ್ಮುಖ ಕಾರ್ಯಾಚರಣೆ ಮಾತ್ರ. ಹೋಗಲಿ, ಅವರು ಎತ್ತಿಹಿಡಿಯುತ್ತಿರುವ ಈ ಹಿಂದುತ್ವದ ಸ್ವರೂಪವಾದರೂ ಏನು ಎಂಬುದು ಅರ್ಥವಾಗದು.

ಭೈರಪ್ಪನವರ ಮುನ್ನುಡಿಯ ಮಾತುಗಳನ್ನೇ ಅನುಸರಿಸಿ ಕಥಾನಾಯಕಿ ಲಕ್ಷ್ಮಿಯೂ ಕೃತಿಯುದ್ದಕ್ಕೂ ಇಂಥ ವೀರಾವೇಶದ ಇತಿಹಾಸ ನಿಷ್ಠೆಯನ್ನೇ ಪ್ರದರ್ಶಿಸುತ್ತಾಳೆ ಐತಿಹಾಸಿಕ ಕಾದಂಬರಿಯ ಅಥವಾ ಸಾಹಿತ್ಯ ರಚಿಸುವಾಗ ಮಾತ್ರ ಘಟನೆಗಳ ಅಂತಃಸತ್ವವು ಸಂಪೂರ್ಣವಾಗಿ ಇತಿಹಾಸದ ಸತ್ಯ ಅಭಿವ್ಯಕ್ತಿಯಾಗಬೇಕು ಎನ್ನುವುದು ಅವಳ 'ವ್ರತ'

ಆದರೆ ಈ ಇತಿಹಾಸ ನಿಷ್ಠೆ ತಮ್ಮ ದಿಕ್ಕಿಗೂ ವಾಪಸು ತಿರುಗಿ ಕುಯ್ಯಬಹುದಾದ ಎರಡು ಅಲಗಿನ ಕತ್ತಿ ಎಂಬುದನ್ನು ಭೈರಪ್ಪ ಮರೆಯುತ್ತಾರೆ.

ಭೈರಪ್ಪನವರು ತಮ್ಮ ಸಂಶೋಧನೆಗಳ ಮೇಲೆ ಅವರಿಗಿರುವ ವ್ಯಾಮೋಹ, ಆತ್ಮವಿಶ್ವಾಸ ಅಂಥದ್ದು! ಆದರೆ ಅವರೇ ಕೇಳುವಂತೆ 'ಇತಿಹಾಸಕಾರನೇ ಇತಿಹಾಸವನ್ನು ಕಾಣುವ ಕಣ್ಣಿಗೆ ಅಡ್ಡ ನಿಂತರೆ ಇತಿಹಾಸ ಕಾಣಲಾರದು ಬರೀ ಹಿಂದುತ್ವದ ಗರ್ವ ಮಾತ್ರ ಕಾಣುತ್ತಾ ಹೋಗುವುದು ವಿಪರ್ಯಾಸದ ಸಂಗತಿ. ಯಾಕೆಂದರೆ ಈ ಕೃತಿಯಲ್ಲಿ ಕಟ್ಟಾ ಹಿಂದೂ ಜೆಹಾದಿಯಂತೆ ಈ ಕೃತಿಯಲ್ಲಿ ಮುಸ್ಲಿಮರ ಆಳ್ವಿಕೆಯ ಬಣ್ಣ ಬಯಲಿಗೆಳೆಯಲು ಅನೇಕ ವರ್ಷಗಳು ಶ್ರಮಿಸಿರುವ ಭೈರಪ್ಪನವರಿಗೆ ತಮ್ಮ ಎಲೆಯಲ್ಲಿ ನೊಣ ಬಿದ್ದದ್ದು ಕಾಣುವುದಿಲ್ಲ ಹಾಗಾಗಿಯೇ ಹಿಂದುತ್ವದ ಗರ್ವ ಇವರ ಕಾದಂಬರಿಯಲ್ಲಿ ಪದೇ ಪದೇ ವಿಜೃಂಭಿಸುತ್ತಲೇ ಇರುತ್ತದೆ.

ಕಾಶಿಯಲ್ಲಿ ಹಿಜಡಾ ಖ್ವಾಜಾ (ದೇವಗಢ ರಾಜಾ) ಜಹಾನನಿಗೆ ಸಿಕ್ಕುವ ಅವಧೂತ ಹೇಳುತ್ತಾನೆ ನಾವು ನೀತಿಯು, ಆಧ್ಯಾತ್ಮದ ಯಾವ ಮಟ್ಟದಲ್ಲಿರುತ್ತೇವೆಯೋ, ಅದಕ್ಕೆ ಅನುಗುಣವಾದ ದೇವರನ್ನು ಸೃಷ್ಟಿಸುತ್ತೇವೆ. ಅಲ್ಲಾಹುವು ಮಹಾಮತ್ಸರದ ದೇವರು; ತನ್ನನು ಬಿಟ್ಟು ಬೇರೆ ದೇವರನ್ನು ಒಪ್ಪಿಕೊಳ್ಳುವವರನ್ನು ಸದಾ ಸುಡುವ ನರಕಕ್ಕೆ ಎಸೆದುಬಿಡುತ್ತದೆ. ಎಂದರೆ ಅಂಥ ದೇವರನ್ನು ಸೃಷ್ಟಿಸಿದವರು ಅಷ್ಟೇ ಮತ್ಸರ ಸ್ವಭಾವದವರು ಅಂತ ಸಿದ್ಧವಾಗುವುದಿಲ್ಲವೆ? ಮುಸ್ಲಿಮರಲ್ಲಿ ಆಧ್ಯಾತ್ಮದ ಕಲ್ಪನೆ ಇಲ್ಲ. ಮನುಷ್ಯ ಮೊದಲು ಒಳಗಿನಿಂದ ಪರಿಶುದ್ಧವಾಗುತ್ತಾ ಬೆಳೆಯಬೇಕು. ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಪರಿಗ್ರಹ ಶೌಚ ಸಂತೋಷ ಸ್ವಾಧ್ಯಾಯ ಈಶ್ವರ ಪ್ರಣಿಧಾನ ಈ ನೀತಿ ನಿಯಮಗಳಿಂದ ಪರಿಶುದ್ಧನಾದವನಿಗೆ ದೇವರ ವಿಷಯ ಮಾತನಾಡುವ ಅಧಿಕಾರವೇ ಇಲ್ಲ ಎಂದು ಹೇಳುತ್ತಾನೆ[3]

ಲಕ್ಷ್ಮಿಯು ತನ್ನ ಕಾದಂಬರಿಯು ಪೂರ್ಣಗೊಳಿಸುವು ಮುನ್ನ ಕಾಶಿಯನ್ನೊಮ್ಮೆ ಕಣ್ಣಾರೆ ನೋಡಬೇಕೆಂದು ಬಂದಾಗ ಸೈಕಲ್ ರಿಕ್ಷಾ ತುಳಿಯುವ ಬಿಸ್ವನಾಥಸರ್ಮಾ ಎಂಬ ಬ್ರಾಹ್ಮಣನೇ ಗೈಡ್. ಲಕ್ಷ್ಮಿ ಕೇಳುತ್ತಾಳೆ ಬ್ರಾಹ್ಮಣರಾಗಿಯೂ ರಿಕ್ಷಾ ತುಳೀತಿದಿಯಲ್ಲಾ? ಉತ್ತರವಾಗಿ ಅವನೊಂದು ಪ್ರವರವನ್ನೇ ಹೇಳುತ್ತಾನೆ :

"ಮಾತಾಜಿ....ಬಡತನವನ್ನಪ್ಪಿ ಬದುಕಬೇಕು ಅನ್ನೊದೇ ಬ್ರಾಹ್ಮನ ಜಾತಿಯ ಧರ್ಮವಲ್ಲವೆ? ಮೊದಲಿಂದ ಕಾಡಿನಲ್ಲಿ ಪರ್ಣಕುಟಿ ಕಟ್ಟಿಕೊಂಡು ವಿದ್ಯ ಕಲಿತು ವಿದ್ಯಾದಾನ ಮಾಡಿಕೊಂಡಿದ್ದ ಜಾತಿಯಲ್ಲವೆ ಇದು? ಈ ಜಾತಿಯನ್ನು ನಾಶ ಮಾಡಿದರೆ ಮಾತ್ರ ಹಿಂದುಗಳನ್ನು ಸಂಪೂರ್ಣವಾಗಿ ಮುಸಲ್ಮಾನರನ್ನಾಗಿ ಪರಿವರ್ತಿಸಬಹುದು ಅಂತ ನವಾಬರು ಸುಲ್ತಾನರು, ಸುಬೇದಾರರು, ಬಾದಶಾಹರು ನಮ್ಮನ್ನು ಸೆರೆ ಹಿಡಿಸಿದರು. ಇಕ್ಕಳದಲ್ಲಿ ಬಾಯಿ ಅಗಲಿಸಿ ಅದರೊಳಕ್ಕೆ ಕ್ಯಾಕರಿಸಿ ಉಗಿದು ಜಾತಿ ಕೆಡಿಸಿದರು. ಕತ್ತಿಯಿಂದ ಕುತ್ತಿಗೆ ಕತ್ತರಿಸಿ ಕೊಂದರು. ನಮ್ಮ ಪೂರ್ವಿಕರು ಹಳ್ಳಿಗಳಿಗೆ ಓಡಿಹೋಗಿ ಪುರಾಣ

ಪುಣ್ಯಕಥೆ ಪ್ರವಚನ ಮಾಡಿ ನಮ್ಮ ಧರ್ಮ ಉಳಿಸಿದೆವು. ಬ್ರಿಟಿಷರು ಬಂದಮೇಲೆ ಈ ಜಾತಿಯನ್ನು ಮುರಿದರೆ ಹಿಂದೂಸ್ತಾನೀಯರನ್ನು ಕಿರಿಸ್ತಾನ ಮಾಡಬಹುದು ಅಂತ ಹಿಕಮತ್ತು ಮಾಡಿದರು. ಬ್ರಿಟಿಷರು ಹೋದ ಮೇಲೆ ಹಿಂದೂಸ್ತಾನಿ ರಾಜಕಾರಣಿಗಳೇ ನಮ್ಮ ಮೇಲೆ ದ್ವೇಷದ ಉರಿ ಹಚ್ಚುತ್ತಾ ಓಟು ಗಿಟ್ಟಿಸ್ತಿದಾರೆ.[೩]

ರಿಕ್ಷಾ ತುಳಿಯುವವನು ಹೇಳಿದುದರಲ್ಲಿ ಲಕ್ಷ್ಮಿಗೆ ಇತಿಹಾಸ ಕಾಣತೊಡಗಿತು. ದೇವಸ್ಥಾನಗಳೆಲ್ಲ ನಾಶಗೊಂಡಮೇಲೆ ಅರ್ಚಕ ವರ್ಗವನ್ನು ಕೊಚ್ಚಿ ಕೊಂದ ಮೇಲೆ ಅಥವಾ ಪೂಜಿಸಲು ಮೂರ್ತಿ ಮಂದಿರಗಳೇ ಇಲ್ಲವಾಗಿ ಅವರೆಲ್ಲ ಹಳ್ಳಿ ಕಾಡುಗಳನ್ನು ಸೇರಿದ ಮೇಲೆ ಹಿಂದೂ ಧರ್ಮವು ಊರುರು ತಿರುಗುವ ಕಥನಕಾರರ ಮೂಲಕ ಬದುಕುಳಿಯಿತು. ಭಜನೆ, ಹಾಡು, ಪದಾವಲಿ, ಕಥಾ ಪ್ರವಚನಗಳ ಅರ್ಚಕ ಪುರೋಹಿತ ವರ್ಗಗಳು ಸಡಿಲಗೊಂಡು ಪ್ರದೇಶ ಭಾಷೆಗಳಲ್ಲಿ ಧರ್ಮ ಹರಿಯುತೊಡಗಿತು. ವೈಶ್ಯ ಶೂದ್ರ ಸಂತರುಗಳು ಹುಟ್ಟಿ ಈ ಪ್ರವಾಸಕ್ಕೆ ವ್ಯಾಪ್ತಿಯನ್ನೂ ಬಿರುಸನ್ನೂ ತಂದರು. ಜಾನಪದ ನುಡಿಗಟ್ಟುಗಳು, ಪ್ರತಿಮೆಗಳು ಪ್ರತಿಭೆಗಳು ಸೇರಿ ಧರ್ಮಕ್ಕೆ ಮರುಹುಟ್ಟು ಬಂತು. ಅದು ಮತ್ತೊಂದು ವಿಧದಲ್ಲಿ ಶಕ್ತಿಶಾಲಿಯಾಯಿತು. ಇಡೀ ಭಾರತದಲ್ಲಿ ಭಕ್ತಿಮಾರ್ಗ ಉಕ್ಕಿ ಹರಿಯಿತು.

ಶೂದ್ರ ಹೆಣ್ಣು ಲಕ್ಷ್ಮಿ, ಬ್ರಾಹ್ಮಣರನ್ನೂ ಮೀರಿಸುವ ಬ್ರಾಹ್ಮಣ ಕನ್ನೆಯಂತೆ ಬ್ರಾಹ್ಮಣ್ಯದ ಸಮರ್ಥಯಲ್ಲಿ ಮುಳುಗಿದ್ದಾಳೆ! ಕಾಶಿಯ ಇತಿಹಾಸವನ್ನು ಮೆಲುಕು ಹಾಕುವಾಗ ಅವಳು ಬರೆದುಕೊಳ್ಳುವ ಟಿಪ್ಪಣಿ ಹೀಗೆ ದಾಖಲಿಸುತ್ತದೆ. ಇತಿಹಾಸದುದ್ದಕ್ಕೂ ತಮ್ಮ ಶ್ರದ್ಧೆಗಾಗಿ ಸಾವಿರ ಸಾವಿರ ಸಂಖ್ಯೆಯಲ್ಲಿ ಬಲಿದಾನ ಮಾಡಿಕೊಂಡ ಬ್ರಾಹ್ಮಣರ ಪರಂಪರೆ ಇದ್ದೂ ಆಗಿನ ಬನಾರಸಿನ ಬ್ರಾಹ್ಮಣರು ಯಾಕೆ ಹೇಡಿಗಳಾದರು? ಅವರನ್ನು ನಿರ್ನಾಮ ಮಾಡುವ ಗುರಿ ಮುಸ್ಲಿಂ ದೊರೆಗಳ ಉದ್ದೇಶ ಫಲ ಕೊಡತೊಡಗಿತ್ತು. ಎಂಥ ವಿಚಿತ್ರ ಆವರಣವಿದು ಎಂದೆನಿಸುತ್ತದೆ.

ತಮ್ಮ ಶ್ರದ್ಧೆಗಾಗಿ ಸಾವಿರ ಸಾವಿರ ಸಂಖ್ಯೆಯಲ್ಲಿ ಬ್ರಾಹ್ಮಣರು ಎಲ್ಲಿ, ಯಾವಾಗ ಬಲಿದಾನ ಮಾಡಿಕೊಂಡರೆಂದು ಕೇಳಿದರೆ ಅದಕ್ಕೆ ಮಾತ್ರ ದಾಖಲೆಯಿಲ್ಲ. ಮುಸ್ಲಿಂ ದಾಳಿಕೋರರ ಚಿತ್ರಣ ನೀಡುವಾಗ ಪುಟಗಟ್ಟಲೆ ದಾಖಲೆ ಸಂಗ್ರಹಿಸಿ ಪಟ್ಟಿ ಮಾಡುವ ಭೈರಪ್ಪನವರಿಗೆ ಏನೆನ್ನಬೇಕು? ಈ ವಿಷಯದಲ್ಲಿ ತಮ್ಮ ಬಾಯಿ ಮಾತನ್ನೇ ಪ್ರಮಾಣ ಎಂಬಂತೆ ಮುಂದೊಡ್ಡುತ್ತಾರೆ. ಈ ಕೃತಿಯಲ್ಲಿ ಹರಳುಗಟ್ಟುತ್ತಿರುವ ಹಿಂದೂತ್ವದ ಸ್ವರೂಪ ಎಂಥದು ಎಂಬುದಕ್ಕೆ ಇಡೀ ಕಾದಂಬರಿಯೇ ಸಾರಿ ಸಾರಿ ಹೇಳುತ್ತದೆ.

ಇವರ ಬಾಯಿ ಮಾತಿನ ಹೊರತು ಬೇರ ಪ್ರಮಾಣವಿಲ್ಲದ ಬ್ರಾಹ್ಮಣ ಇತಿಹಾಸವೇ ಅವರ ಪ್ರಕಾರ ಹಿಂದೂ ಇತಿಹಾಸ; ಭಾರತೀಯ ಇತಿಹಾಸ. " ವಿದ್ಯೆ ಕಲಿತು ವಿದ್ಯಾದಾನ ಮಾಡಿಕೊಂಡಿದ್ದ ಜಾತಿ" ಎಂದು ಭೈರಪ್ಪ ಬಣ್ಣಿಸುವ ಜಾತಿಯೇ ಶೇಕಡಾ ತೊಂಬತ್ತು ಜನಕ್ಕೆ ವಿದ್ಯಾ ನಿರಾಕರಿಸಿದ ಜಾತಿ; ಮನುಸ್ಮೃತಿ ಬರೆದ ಜಾತಿ–ಎಂಬುದನ್ನು ಅವರು ಬೇಕೆಂದೇ ಮರೆಮಾಚುತ್ತಾರೆ, ಹಿಂದೂ ಧರ್ಮ ಇಡೀ ದೇಶದಲ್ಲಿ ಭಕ್ತಿಧಾರೆಯಾಗಿ ಹರಿದುದನ್ನು ಭಾವಪರವಶ ತನ್ಮಯತೆಯಿಂದ ಕಥಿಸುತ್ತಿರುವ ಭೈರಪ್ಪನವರ ನಿಜಬಣ್ಣವೂ ಇಲ್ಲೇ ಬಯಲಾಗುತ್ತಿದೆ.

ಭೈರಪ್ಪನವರು ತಮ್ಮದೇ ಆದ ಅವರಣ ಸೃಷ್ಟಿಸುತ್ತಾರೆ ಮುಸ್ಲಿಂರ ದಾಳಿಯಲ್ಲಿ ತತ್ತರಿಸಿದ ಬ್ರಾಹ್ಮಣ ಪುರೋಹಿತ ವರ್ಗ ಹಳ್ಳಿ ಹಳ್ಳಿ ಸುತ್ತಿ ಧರ್ಮ ಉಳಿಯಲು

ಕಾರಣವಾಯಿತು ಎಂದು ಪ್ರತಿಪಾದಿಸುವ ಇವರಿಗೆ, ಕ್ರಿಸ್ತಪೂರ್ವ ಆರು-ಐದರ ಶತಮಾನದಲ್ಲೇ ವೈದಿಕಶಾಹಿ ವಿರುದ್ಧ ಹೋರಾಡಿದ ಬುದ್ಧನ ಧರ್ಮ ಧರ್ಮವಲ್ಲ. ಅಷ್ಟೇಕೆ, ಇಲ್ಲಿ ಕಾಯಕ ಜೀವಿಗಳು ಭಕ್ತಿ ಪಂಥ ಹನ್ನರಡನೇ ಶತಮಾನದಲ್ಲೇ ಬಸವಣ್ಣ ತುಕಾರಾಮ ಅಂಥವರ ನೇತೃತ್ವದಲ್ಲಿ ಜಾತಿ ಕಟ್ಟುಗಳ ವಿರುದ್ಧ ಹೋರಾಡಿದ್ದೂ ಇವರಿಗೆ ನೆನಪಾಗದಿರುವುದು ಇದು ಎಂಥ ವಿಪರ್ಯಾಸ!

ಆದರೆ ಮುಸ್ಲಿಮರು ಬರುವ ಮೊದಲ ಭರತಖಂಡದ ಯುದ್ಧಗಳಲ್ಲಿ ಗೆದ್ದವನು-ಸೋತನು ಇಬ್ಬರೂ ಪಾಲಿಸುತ್ತಿದ್ದುದು ಜಾತಿ ಶ್ರೇಣಿ ಕಟ್ಟುಪಾಡುಗಳ ಹಿಂದೂ ಧರ್ಮವನ್ನೇ ಅಲ್ಲವೇ? ಭಿನ್ನ ಧರ್ಮ ಹೇರುವ ಪ್ರಶ್ನೆಯಲ್ಲಿ ಬಂತು? ಅಷ್ಟಕ್ಕೂ ಅದೇ ಆಚಾರ ವ್ಯವಹಾರ ಕುಲಸ್ಥಿತಿ ಕಾಪಾಡಬೇಕು ಎಂಬುದರಲ್ಲಿ ಜಾತಿಯ ಕಟ್ಟುಗಳನ್ನು ಸಡಿಲಿಸಬಾರದೆಂಬ ಸಂಕರ ಭಯದ ಹೊರತು ಬೇರೆ ಇನ್ನಾವ ಕಾಳಜಿಯಿತ್ತು? ಅಷ್ಟಕ್ಕೂ ದೇವರಿಲ್ಲ ಎಂದವನನ್ನು ಹಿಂದೂ ಧರ್ಮ ಸಹಿಸಿದೆ, ಭೈರಪ್ಪನವರು ಹೆಮ್ಮೆಪಡುವ ಆಧ್ಯಾತ್ಮಿಕ ಸ್ವಾತಂತ್ರ್ಯ ಬಹುಶಃ ಇದೆ. ಆದರೆ ಜಾತಿ ಇಲ್ಲ ಎಂದವನನ್ನು ಹಿಂದೂ ಧರ್ಮ ಕ್ಷಣಮಾತ್ರವೂ ಸಹಿಸಿಲ್ಲ! ವೈದಿಕರು ಬೌದ್ಧಧರ್ಮವನ್ನು ಭಾರತದಿಂದ ಓಡಿಸಿದ್ದೆ ಅದಕ್ಕಾಗಿ ಮತ್ತು ಹಿಂಬಾಲಕರನ್ನು ಕಟ್ಟಿಕೊಂಡು ಆದಿ ಶಂಕರಾಚಾರ್ಯ ನಾಗಾರ್ಜುನಕೊಂಡದ ಬೌದ್ಧ ಸ್ಮಾರಕಗಳನ್ನು ಧ್ವಂಸ ಮಾಡಿದ್ದು ಯಾವ ಮುಸ್ಲಿಂ ದಾಳಿಕೋರನಿಗೂ ಕಮ್ಮಿಯಾದುದಲ್ಲ. ಅದಕ್ಕೆ "ಶಂಕರಾಚಾರ್ಯ ಹುಟ್ಟಿ ಬರದೇ ಇದ್ದರೆ ವೇದಾಂತವೇ ಭಾರತದಿಂದ ನಾಪತ್ತೆಯಾಗಿಬಿಡುತ್ತಿತ್ತು" ಎಂದು ಈಗಲೂ ನೆಮ್ಮದಿಯ ನಿಟ್ಟುಸಿರು ಬಿಡುವ ಬ್ರಾಹ್ಮಣರು ಸಿಗುತ್ತಾರೆ.[೪]

ಭೈರಪ್ಪನವರ ಸತ್ಯ ನಿಷ್ಠೆ ಇವನ್ನೆಲ್ಲ ಒಳಗೊಳ್ಳುವುದಿಲ್ಲ. ಕಾಶ್ಮೀರದ ಹಿಂದೂ ದೊರೆ ಹರ್ಷವರ್ಧನ ತನ್ನ ಸುಖಭೋಗಕ್ಕಾಗಿ ಲೆಕ್ಕವಿಲ್ಲದಷ್ಟು ಹಿಂದೂ ದೇವಾಲಯಗಳನ್ನು ನಾಶ ಮಾಡಿ ದೋಚಿದ್ದೂ ಇವರ ಐತಿಹಾಸಿಕ 'ಅವರಣ' ಕಾದಂಬರಿಯಲ್ಲಿ ಸೇರುವುದಿಲ್ಲ. ಇಸ್ಲಾಂ ಪ್ರಾವಾದಿಗಳು ದೇವರ ಪ್ರೇರಣೆಯಿಂದಲೇ ಎಲ್ಲವನ್ನೂ ಮಾಡಿದ್ದಲ್ಲವೆ? ಎಂದು ಖ್ವಾಜಾ ಜಹಾನ್ ಆ ಗಂಗಾನದಿ ತೀರದ ಅವಧೂತನನ್ನು ಕೇಳಿದರೆ ಅವನು ನೀಡುವ ಉತ್ತರ ಮಾರ್ಮಿಕವಾಗಿದೆ. ಮನುಷ್ಯ, ಸಂತ, ಸಾಧು, ಪ್ರವಾದಿ, ಋಷಿ, ಯಾವ ವೇಷಧಾರಿಯಾಗಿದ್ದರೂ ತನ್ನ ಕೆಲಸಕ್ಕೆ ದೈವಾಗಣೆಯ ಸಮರ್ಥನೆ ಹೇಳುವುದು ತನ್ನ ಜವಾಬ್ದಾರಿಯನ್ನು ತಪ್ಪಿಸಿಕೊಂಡಂತೆ ಎನ್ನುತ್ತಾನೆ.

ಭೈರಪ್ಪನವರಿಗೆ ತಮ್ಮ ಪ್ರತಿಪಾದನೆಗಳ ರಣಾವೇಶದಲ್ಲಿ ಮರೆತು ಹೋಗಿದ್ದಾರೆ ವರ್ಣಾಶ್ರಮದ ಸೂತ್ರವನ್ನು ಅಂದರೆ ಬ್ರಹ್ಮನ ಬಾಯಿಂದ ಬ್ರಾಹ್ಮಣ, ತೋಳಿನಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ ಮತ್ತು ಪಾದಗಳಿಂದ ಶೂದ್ರ ಜನಿಸಿದನೆನ್ನುವ ಪುರಾಣವನ್ನು ಸೃಷ್ಟಿಸಿದ ಪುರುಷ ಸೂಕ್ತ-ವೇದಗಳ ಭಾಗ ಮತ್ತು ವೇದಗಳು 'ಅಪೌರುಕ್ಷೆಯ, ಅಂದರೆ ಮನುಷ್ಯ ರಚನೆಯಲ್ಲ; ಮಧ್ಯವರ್ತಿಗಳ ಸಹವಾಸವಿಲ್ಲದೆ ದೇವರು ನೇರವಾಗಿ ಮಾಡಿದ ಸೃಷ್ಟಿ ಎಂದು ನಂಬುವ ಅಸಂಖ್ಯಾತ ವೇದ ಪಂಡಿತರು ಈಗಲೂ ಇದ್ದಾರೆ.

ಹಿಂದೂ/ಬ್ರಾಹ್ಮಣ ಧರ್ಮದಲ್ಲಿ ಅಂತರ್ಗತವಾದ ಅನ್ಯಾಯಗಳ ಅರಿವು ಭೈರಪ್ಪನವರಿಗೆ ಇಲ್ಲವೆಂದಲ್ಲ, ಆದರೆ ಅವು ಕೂಡ ಇವರಿಗೆ, ತಮ್ಮ ಎಂದಿನ ಜಾಣ ಕೋಮುವಾದಿ ಪಾಂಡಿತ್ಯದಿಂದಲೇ ನಿವಾರಿಸಿಕೊಳ್ಳಬಹುದಾದ ತೊಡಕುಗಳು ಮಾತ್ರ.

ಹಿಂದೂವಿನಷ್ಟು ಹೃದಯಹೀನ ಧರ್ಮ ಬೇರೊಂದಿಲ್ಲ ಸಾಮಾಜಿಕ ಕಾಳಜಿ ಇಲ್ಲದ,

ಸಮಾನತೆಗೆ ಕಡುವೈರಿಯಾದ, ಶ್ರೇಣಿಕೃತ ಸಮಾಜದಿಂದ ಕೂಡಿದ, ಪ್ರಪಂಚದ ಇತಿಹಾಸದಲ್ಲಿ ಎಲ್ಲೂ ಇಲ್ಲದ ಕ್ರೌರ್ಯದಿಂದ ದಲಿತರನ್ನು ಸ್ತ್ರೀಯರನ್ನು ವಿಧವೆಯರನ್ನು ಶೋಷಿಸಲು ಬೇರೊಂದು ಧರ್ಮವಿಲ್ಲ ಎಂದು ತಾನು ಕ್ರಾಂತಿಕಾರಿಯಾಗಿದ್ದಾಗ ಲಕ್ಷ್ಮಿ ಜಂಭಕೊಚ್ಚಿಕೊಂಡಿದ್ದಳು.

ಲಕ್ಷ್ಮಿ ತನ್ನ 'ಸತ್ಯಶೋಧನೆ'ಗಿಂತ ಮುಂಚೆ ತಿಳಿದಿದ್ದ ಅಜ್ಞಾನದ ನಿಲುವು: ಅವಳು ತನ್ನ ಅಧ್ಯಯನವನ್ನು ಪೂರ್ಣಗೊಳಿಸಿದ ನಂತರ ಈ ದೃಷ್ಟಿಯೂ ಬದಲಾಗುತ್ತದೆ. ಎಂದು ಭೈರಪ್ಪನವರು ಹೇಳಲು ಪ್ರಯತ್ನಿಸದ್ದಾರೆ. ಆ ಮೂಲಕ ಲಕ್ಷ್ಮಿಯ ಈ ಗಂಭೀರ ಆಕ್ಷೇಪದಲ್ಲೇ ಹುರುಳಿಲ್ಲ ಎನ್ನುವಂತೆ ಗುಡಿಸಿ ಹಾಕುವುದು ಅವರಿಗೆ ಸಾಧ್ಯವಾಗುತ್ತದೆ. ಹೀಗೆ ಅನೇಕ ಗೊಂದಲಗಳು 'ಅವರಣ'ದಲ್ಲಿ ತಮಗೆ ಬೇಕಾದ ರೀತಿಯಲ್ಲಿ ಪಾತ್ರಗಳು ನಿರ್ವಾಣ ಮಾಡುತ್ತಾ ತಿರುಚಿ ಬರೆಯಲು ಪ್ರಯತ್ನಿಸಿದ್ದಾರೆ.

ಭಾರತೀಯ ಸಂವಿಧಾನದ ಸಮಾನತೆಯ ಆಶೆಯಗಳಿಗೆ ಅಂಬೇಡ್ಕರರ ಸ್ವಾಭಿಮಾನ ಚಳುವಳಿಯಾಗಲೀ, ಅವರು ರಾಜ್ಯಾಂಗ ರಚನೆಯಲ್ಲಿ ವಹಿಸಿದ ಮೇರು ಜವಾಬ್ದಾರಿಯಾಗಲೀ ಅಥವಾ ಅದಕ್ಕೆ ಪೂರಕವಾದ ಗಾಂಧೀಜಿಯ ಭಾವೈಕ್ಯದ ರಾಜಕಾರಣವಾಗಲೀ ಇವು ಯಾವುವೂ ಕಾರಣವಲ್ಲ; ಎಲ್ಲವೂ ಬ್ರಾಹ್ಮಣ ಶಾಹಿಯ ತಪ್ಪೊಪ್ಪಿಗೆ ಮತ್ತು ಪಶ್ಚಾತ್ತಾಪದ ಫಲಮಾತ್ರ. ಅದು ಹೋಗಲಿ ಭೈರಪ್ಪನವರು ವಾದಿಸುವಂತೆ ಹಿಂದೂ ನಾಯಕತ್ವವೂ ಪ್ರಾಂಜಲವಾಗಿ ಮನುವಿನ. ತಪ್ಪಿಗೆ ಪಶ್ಚಾತ್ತಾಪ ಪಟ್ಟರೂ ನಮ್ಮ ಕಣ್ಣು ಮುಂದೆಯೇ ಯಾಕೆ ಬೆಂಡಿಗೇರಿ, ಕಂಬಾಲಪಲ್ಲಿಗಳಂಥ ಜಾತಿಮೂಲ ದುರಂತಗಳ ಸರಮಾಲೆಯೇ ನಡೆಯಿತು; ಮತ್ತು ನಡೆಯುತ್ತಿದೆ ಎಂಬ ಪ್ರಶ್ನೆಗಳ ಸರಮಾಲೆ ಭೈರಪ್ಪನವರ ಮುಂದೆ ಇಟ್ಟರೆ ಅವರ ಇತಿಹಾಸ ನಿಷ್ಠೆ ಅಂಥ ಪ್ರಶ್ನೆಗಳನ್ನು ಎದುರಿಸುವುದೇ ಇಲ್ಲ. ಅಷ್ಟೇಕೆ, ಲಕ್ಷ್ಮಿ ಮತ್ತು ಅಮೀರರು ಹೊಸ ಪ್ಲಾಟ್ ಹುಡುಕಿದಾಗಿನ ಅನುಭವದ ಬಣ್ಣನೆ ತೆಗೆದುಕೊಂಡರೂ ಗೊತ್ತಾಗುತ್ತದೆ. ಲಕ್ಷ್ಮಿ ಮತ್ತು ಅಮೀರನಿಗೆ ಪ್ಲಾಟ್ ಹುಡುಕುವುದೇ ಕಷ್ಟವಾಗಿತ್ತು. ತಮ್ಮ ನೆರೆಯಲ್ಲಿ ತಮ್ಮದಲ್ಲದ ಜಾತಿಯವರು ಇರುವುದನ್ನು ಯಾರೂ ಇಷ್ಟಪಡುವುದಿಲ್ಲ. ತಮ್ಮದಲ್ಲದ ಧರ್ಮದವರನ್ನಂತೂ ಒಪ್ಪುವುದಿಲ್ಲ. ಅಲ್ಲಿಗೆ ಭೈರಪ್ಪ ಮುಂದಿಟ್ಟ 'ಪ್ರಾಂಜಲ ತಪ್ಪೊಪ್ಪಿಗೆ'ಯ ಫಲಶ್ರುತಿಯೇನಾಯಿತು? ಹಾಗೇ ಪರಧರ್ಮಗಳನ್ನು ದ್ವೇಷಿಸುವ, ತಮ್ಮ ಧರ್ಮ,ತಮ್ಮ ಪ್ರವಾದಿಗಳ ಬೋಧನೆ ಮಾತ್ರ ಶ್ರೇಷ್ಠವೆಂದು ನಂಬಿ, ಅವರು ಬೋಧಿಸಿರುವ ತಮ್ಮ ಧರ್ಮಕ್ಕೆ ಸೇರಲು ಒಪ್ಪದವರನ್ನು ಕೊಲ್ಲಿರಿ ಎಂಬ ತತ್ತ್ವವನ್ನು ತಿರಸ್ಕರಿಸಿ ಏಕಂ ಸತ್ಯ ವಿಪ್ರಾಃ ಬಹುಧಾ ವದಂತಿ ಎಂಬ ತತ್ವವನ್ನು ಎಲ್ಲರಿಗೂ ಕಡ್ಡಾಯ ಮಾಡುವತನಕ ಭಾವೈಕ್ಯ ಅನ್ನುವುದು ಬುರುಡೆ ಮಾತಾಗುವುದಿಲ್ಲವೆ? ಅಂದರೆ ಸಮಾನ ನಾಗರಿಕ ಸಂಹಿತೆಯಿಲ್ಲದೆ ಭಾವೈಕ್ಯ ಸಾಧ್ಯವಿಲ್ಲವೆಂಬ ಸಂಘ ಪರಿವಾರದ ವಾದವನ್ನೇ ಭೈರಪ್ಪ ಈ ರೀತಿ ಮಂಡಿಸುತ್ತಿದ್ದಾರೆ.

ಇತಿಹಾಸದ ಅಧ್ಯಯನ ಮಾಡುವುದೇ ಸಾಮಾಜಿಕ ಸಾಮರಸ್ಯ ಮೂಡಿಸುವುದಕ್ಕಾಗಿ. ಹಳೆಯ ಕಹಿಯನ್ನು ಕಟ್ಟಿಕೊಂಡು ಈಗೇನು ಮಾಡುವುದಿದೆ? ಹಿಂದೂ ಮುಸ್ಲಿಂ ಎಂಬ ಭೇದವು ಬ್ರಿಟಿಷರು ಬಿತ್ತಿದ ವಿಷಬೀಜ. ಭಾರತದ ಶ್ರೇಣೀಕೃತ ಸಮಾಜ ವ್ಯವಸ್ಥೆಯಿಂದ ಬಿಡಿಸಿಕೊಳ್ಳಲು ಕೆಳವರ್ಗದವರೇ ಮುಸ್ಲಿಮರನ್ನು ಆಹ್ವಾನಿಸಿದರು. ಪ್ರವಾದಿ ಮಹಮ್ಮದರ ಬೋಧೆ ಇಲ್ಲದಿದ್ದರೆ ಭಾರತದ ಕೆಳವರ್ಗದವರ ಜೀವನವು ನರಕವಾಗಿಯೇ ಇರುತ್ತಿತ್ತು. ಮುಸ್ಲಿಮರು ಹೊರಗಿನ ದಾಳಿಕೋರರಾದರೆ ಆರ್ಯರೂ ದಾಳಿಲೋರರೇ, ಬ್ರಾಹ್ಮಣನು ಬಾಯಿಂದ, ಕ್ಷತ್ರಿಯನು ಬಾಹುಗಳಿಂದ, ವೈಶ್ಯನು ತೊಡೆಗಳಿಂದ ಶೂದ್ರನು ಪಾದದಿಂದ ಹುಟ್ಟಿನೆಂಬ ಪ್ರತಿಮೆಯನ್ನಿಟ್ಟುಕೊಂಡೇ ಭಾರತದಲ್ಲಿ ವಿಗ್ರಹ ಪೂಜೆ ಆರಂಭವಾಯಿತು.

ಮುಸ್ಲಿಮರು ಮಾಡಿದ ವಿಗ್ರಹ ಭಂಜನೆಯಲ್ಲಿ ಪೆಟ್ಟು ಬಿದ್ದಿದ್ದು ಮೇಲು ಜಾತಿಯವರಿಗೆ; ಮುಸ್ಲಿಂ ವಿರೋಧಿ ಭಾವನೆಯನ್ನು ಹತ್ತಿಸುತ್ತಿರುವವರೊ ಅವರೇ, ಎಂದು ಮುಂತಾಗಿ ಒಬ್ಬೊಬ್ಬರೂ ಒಂದೊಂದು ಕಾಣಿಕೆಯಾಗಿ ಹೇಳತೊಡಗಿದರು.



ಭೈರಪ್ಪನವರು ಭಾರತೀಯ ಸಮಾಜದಲ್ಲಿ ಕೆಳಜಾತಿಗಳೇ ಇರಲಿಲ್ಲ ಈಗಲೂ ಇಲ್ಲ, ಜಾತಿಮೂಲ ಅನ್ಯಾಯಗಳೂ ಇಲ್ಲ; ಕಾಡುವಾಸಿ ಬುಡಕಟ್ಟುಗಳೆಲ್ಲವೂ ಮುಸ್ಲಿಮರ ಆಡಳಿತದಲ್ಲಿ ಕಾಡು ಪಾಲಾದ ಮೇಲುಜಾತಿ ಜನಾಂಗಗಳೇ ಎಂಬ ವಾದ ಮುಂದಿಡುತ್ತಿದ್ದಾರೆ. ಇದು ಶುದ್ಧ ಸುಳ್ಳು ಅನಿಸುತ್ತದೆ. ಆರ್ಯರು ದ್ರಾವಿಡರದು ಎಂದು ಪ್ರತ್ಯೇಕವಾಗಿ ವಿಂಗಡಿಸಬಹುದಾದ ನಾಗರಿಕತೆಯು ಭಾರತದಲ್ಲಿರಲಿಲ್ಲ ಎನ್ನುತ್ತಾರಲ್ಲ, ಇದು ಹೇಗೆ ನಂಬುವುದು. ಬರೀ ಸುಳ್ಳಿನ ಹಣಿಕೆಯನ್ನೇ ಹೆಣೆದಿದ್ದಾರೆ ಯಾಕೆಂದರ ಭರತ ಖಂಡದಲ್ಲಿ ಆರ್ಯ ಮತ್ತು ಆರ್ಯೇತರ ಎಂಬುವು ಪ್ರತ್ಯೇಕ ಜನಾಂಗ ಗಳಿಲ್ಲದಿರಬಹುದು, ಆದರೆ ಅವು ಖಚಿತ ಗಡಿಗಳಿದ್ದ ಭಿನ್ನ ಸಂಸ್ಕೃತಿಗಳು. ಭಾಷೆ ಮತ್ತು ವರ್ಣಾಶ್ರಮ ಧರ್ಮಗಳೇ ಅವೆರಡೂ ಸಂಸ್ಕೃತಿಗಳ ನಡುವಣ ವ್ಯತ್ಯಾಸದ ಗುರುತುಗಳು. ಆರ್ಯ ಸಂಸ್ಕೃತಿಯ ತಿರುಳು ವರ್ಣಾಶ್ರಮ ಧರ್ಮ/ ಜಾತಿ ಪದ್ಧತಿಯಾದರೆ ಆರ್ಯೇತರ ಅಥವಾ ಮ್ಲೇಚ್ಛ ಸಂಸ್ಕೃತಿ ಜಾತ್ಯಾತೀತವಾಗಿತ್ತು. ಭೌಗೋಳಿಕವಾಗಿಯೂ ಗಂಗಾ ನದಿ ತೀರ ಸಂಸ್ಕೃತಿಯನ್ನು ಆರ್ಯಾವರ್ತವೆಂದೂ, ಉಳಿದ ಭಾಗಗಳನ್ನು ಮ್ಲೇಚ್ಛ ದೇಶವೆಂದೂ ವೇದೋತ್ತರ ಪಠ್ಯಗಳು ಬಣ್ಣಿಸುತ್ತವೆ.

ಈ ಕಾರ್ಯ ಜನಾಂಗದ ಶ್ರೇಷ್ಠತೆಯ ವ್ಯಸನ ಹುಟ್ಟಿದ್ದು ಕೂಡ ಐರೋಪ್ಯ ಇತಿಹಾಸಕಾರರ ಮೂಲಕ ಮತ್ತು ಈ ಚರ್ಚೆ ನಮ್ಮನ್ನು ಇತಿಹಾಸ ರಚನೆಯ ರಾಜಕಾರಣದ ಕಡೆ ಒಯ್ಯುತ್ತದೆ. ಹಾಗೆಯೇ, ಈ ಜಿಜ್ಞಾಸೆಯಿಲ್ಲದೆ ಭೈರಪ್ಪನವರ ಸೈದ್ಧಾಂತಿಕ ನೆಲೆಯ ಬೇರುಗಳನ್ನು ಅರಿಯುವುದೂ ಸಾಧ್ಯವಿಲ್ಲ. ಮನುಷ್ಯ ಚರಿತ್ರೆಯಲ್ಲಿ, ಇತಿಹಾಸ ರಚನೆ ನಡೆದಿರುವುದೇ ರಾಜಕೀಯ ಅಗತ್ಯಗಳನ್ನು ಪೂರೈಸಲು, ಭವಿಷ್ಯದ ಸ್ವರೂಪದತ್ತ ದೃಷ್ಟಿ ನೆಟ್ಟ ಇತಿಹಾಸಕಾರರ ಭೂತವನ್ನು ಕೆದುಕುತ್ತಾನೆ.



ಸಾವಿರಾರು ವರ್ಷಗಳ ಆಕಾರಹೀನ ದಾಖಲೆಗಳಲ್ಲಿ ತಮಗೆ ಬೇಕಾದ್ದನ್ನು ಹೆಕ್ಕಿಕೊಂಡು ಯಾವ ತೀರ್ಮಾನಕ್ಕೆ ಬೇಕಾದರೂ ಪುರಾವೆಗಳನ್ನು ಗುಡ್ಡೆಹಾಕಿ ವಾದಿಸಲು ಸಾಧ್ಯವಿರುವಾಗ, ಇತಿಹಾಸ ರಚನೆಯೂ ಕಥೆ ಕಾದಂಬರಿಗಳಂತೆಯೇ ಕಾಲ್ಪನಿಕ ಸೃಷ್ಟಿಯ ರೂಪ ತಾಳುವುದು ಆಶ್ಚರ್ಯವಿಲ್ಲ. ಅದಕ್ಕೇ ಇಸ್ಲಾಂ ಮೂಲಭೂತವಾದವಾಗಲೀ, ಹಿಂದೂ ಮೂಲಭೂತ ವಾದವಾಗಲೀ, ಯಾವ ಧರ್ಮಾಂಧತೆಯೂ ಮನೋವಿಕಾರವೇ ಎಂದು ಅರಿತವರಾರೂ, ಭೈರಪ್ಪನವರ ಹಾಗೆ ಒಂದರ ಪಕ್ಷ ವಹಿಸಿ ಚಂಡಿ ಹಿಡಿದು ಕೂರುವುದಿಲ್ಲ. ಹಾಗಾದರೆ ಭೈರಪ್ಪನವರು ಹಾಗೇಕೆ ಮಾಡುತ್ತಿದ್ದಾರೆ ಎಂಬುದು ತಿಳಿಯದಾಗಿದೆ.

ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನಗಳು ಸಿಡಿದು ಬಾಂಗ್ಲಾದೇಶ ಉದಯವಾದಾಗಲೇ ಹಿಂದೂ–ಮುಸ್ಲಿಂ ಜನಾಂಗ ಭೇದ ಹಾಗೂ ಮುಸ್ಲಿಂ ರಾಷ್ಟ್ರದ ತತ್ವ ನುಚ್ಚುನೂರಾಗಿ ಹೋದರೂ, ಕೋಮುವಾದಿ ಚರಿತ್ರಾಕಾರರು ಈಗಲೂ ಮುಸ್ಲಿಂ ದಾಳಿಕೋರರಿಂದ ಶಕ್ತಿಗುಂದಿದ ಭಾರತೀಯ ಪರಂಪರೆಯ ಬಗ್ಗೆ ಇನ್ನೂ ಕಣ್ಣೀರು ಸುರಿಸುತ್ತಲೇ ಇದ್ದಾರೆ ಭೈರಪ್ಪನವರಂತೆ ಎಂದು ಹೇಳಬಹುದು. 'ಸತ್ಯಾನ್ವೇಷಣೆ'ಗೆ ಭೈರಪ್ಪನವರು ಔರಂಗಜೇಬನ ಕಾಲವನ್ನೇಕೆ ಆರಿಸಿಕೊಂಡರು?

ಆರೆಸ್ಸೆಸ್ ಶಾಖೆಗಳಲ್ಲಿ ಮಕ್ಕಳಿಗೆ ಆಡಿಸುವ ಆಟಗಳಲ್ಲಿ ಶಿವಾಜಿ–ಔರಂಗಜೇಬರನ್ನು

ಕುರಿತ 'ಮೈ ಶಿವಾಜಿ ಹ್ಲೂಂ' ಆಟವೂ ಒಂದು. ಆ ಆಟದಲ್ಲಿ ಒಂದಷ್ಟು ಜನ ತಾನು ಶಿವಾಜಿ ಎಂದು ಹೇಳಿಕೊಂಡು ಓಡಾಡುವಾಗ ಒಬ್ಬ 'ಮೈ ಔರಂಗಜೇಬ್ ಹ್ಲೂಂ' ಅನ್ನುತ್ತಾನೆ. ಕೂಡಲೇ ಈ ಶಿವಾಜಿಗಳೆಲ್ಲ ಅವನ ಮೇಲೆ ಮುಗಿಬಿದ್ದು ದಾಳಿ ಮಾಡುವ ಮೂಲಕಾಂತರ ಮುಸ್ಲಿಂ ದ್ವೇಷಕ್ಕೆ ಮಕ್ಕಳ ಮನಸ್ಸನ್ನು ಹುರಿಗೊಳಿಸುವುದು ಈ ಆಟದ ಉದ್ದೇಶ.

ಭೈರಪ್ಪನವರಿಗೆ ಈ ಕಾದಂಬರಿಯೂ ಅಂಥದೊಂದು ಆರೆಸ್ಸೆಸ್ ಆಟವೇ ಇಲ್ಲಿ ಶಿವಾಜಿಯ ಸಾಹಸಗಳನ್ನು ನಿರೂಪಿಸುತ್ತ ಶಿವಾಜಿ ಸ್ವಾಭಿಮಾನಿ ದೇಶಭಕ್ತ ಮಾತ್ರವಲ್ಲ, ಹಿಂದೂ ಪುನರುತ್ಥಾನದ ನಾಯಕ ಎಂದು ಸಂಘಪರಿವಾರ ಕಟ್ಟಿರುವ ಮಿಥ್ಯಾಕೃತಿಯನ್ನೇ ಬೆಳೆಸಿಕೊಂಡು ಹೋಗುವುದರ ಹೊರತು ಭೈರಪ್ಪನವರಿಗೆ ಈ ಕಾದಂಬರಿಯಲ್ಲಿ ಬೇರಾವ ಉದ್ದೇಶವೂ ಇದ್ದಂತಿಲ್ಲ.

'ಆವರಣ' ಕಾದಂಬರಿಯಲ್ಲಿ ಖ್ವಾಜಾ ಜಹಾನ್-ಮುಸಲ್ಮಾನರ ಆಳ್ವಿಕೆಯನ್ನು ಕಿತ್ತೊಗೆದು ಹಿಂದೂಗಳ ಸಾಮ್ರಾಜ್ಯ ಕಟ್ಟುವುದು ಶಿವಾಜಿಯ ಮಹತ್ವಾಕಾಂಕ್ಷೆಯಾಗಿತಂತೆ ಅಂದುಕೊಂಡರೆ, ಲಕ್ಷ್ಮಿ ಹಲವಾರು ಬಾರಿ ಮರಾಠರನ್ನು ಆದಿ ಹಿಂದೂತ್ವವಾದಿಗಳಾಗಿಯೇ ಕಾಣುತ್ತಾಳೆ. ಬ್ರಿಟಿಷರ ವಿರುದ್ಧ ಹೋರಾಡಿದನೆಂಬ ಕಾರಣವನ್ನು ಮುಂದೆ ಮಾಡಿ ಟಿಪ್ಪುವನ್ನು ರಾಷ್ಟ್ರನಾಯಕನೆನ್ನಬಹುದಾದರೆ ಅದೇ ಬ್ರಿಟಿಷರ ವಿರುದ್ಧ ಹೋರಾಡಿದ ಮರಾಠರನ್ನೇಕೆ ಇತಿಹಾಸಕಾರರು ಸಾಹಿತಿಗಳು ಒಪ್ಪುವುದಿಲ್ಲ ಅಥವಾ ಬಿಂಬಿಸುವುದಿಲ್ಲ?

ಆವರಣವನ್ನು ರೂಪಿಸಿರುವ ಈ ನೋಟ ಭೈರಪ್ಪನವರ ನಿಷ್ಠುರ ಇತಿಹಾಸ ಶೋಧನೆಯ ಫಲ ಎಂಬುದೇ ಪಕ್ಕಾ ಸುಳ್ಳು ಎಂದೆನಿಸುತ್ತದೆ. ಯಾಕೆಂದರೆ ಮೊದಲಿನಿಂದಲೂ ಹಿಂದುತ್ವದ ಹೆಮ್ಮೆ ಅವರ ತಾತ್ವಿಕತೆವರು ತವರು ಮನೆ ಅದಕ್ಕಾಗಿ ಅವರ ಆರೆಸ್ಸೆಸ್ ಆಟ ಹಾಗೆ ಮುಂದುವರೆಸಿಕೊಂಡು ಬಂದಿದ್ದಾರೆ.

ಆವರಣದಲ್ಲಿ ತಮ್ಮ ಪೂರ್ವಗ್ರಹಕ್ಕೆ ಸಾಕ್ಷ್ಯಗಳನ್ನು ಹುಡುಕುವುದೇ ಅವರ ಇತಿಹಾಸ ನಿಷ್ಠೆಯಾಗಿದೆ. ಅಕ್ಬರ ಬಾದಶಾಹನ ಚಿತ್ರಣವನ್ನು ಇವರು ನಿರ್ವಹಿಸಿರುವ ರೀತಿಯಲ್ಲೇ ಇವರ ಕುಯುಕ್ತಿ ಮತ್ತು ಧರ್ಮಾಂಧತೆಯ ಹಮ್ಮು ನಿಚ್ಚಳವಾಗುತ್ತದೆ. ಅಕ್ಬರನ ಪ್ರಸ್ತಾಪ ಮೊದಲು ಬರುವುದು. ಲಕ್ಷ್ಮಿಯ ಗಂಡ ಅಮೀರನ ಪತ್ರದಲ್ಲಿ ಅಕ್ಬರ ಮಹಾನ್ ಮತ್ತು ರಾಷ್ಟ್ರವೀರ ಟಿಪ್ಪು-ಇವರಿಬ್ಬರ ಬಗ್ಗೆ ನಾಟಕ ಬರೆದು ಆಡಿಸಲು ಸರ್ಕಾರ ಕೇಳಿದೆ; ನನಗೆ ಸಮಯವಿಲ್ಲವಾದ್ದರಿಂದ ನೀನು ಮಾಡಿಸುವೆಯಾ? ಎಂದು ಕೇಳಿ ಅಮೀರ ಲಕ್ಷ್ಮಿಗೆ ಬರೆಯುತ್ತಾನೆ. ಆ ವೇಳೆಗಾಗಲೇ ಲಕ್ಷ್ಮಿ ತನ್ನ ಇತಿಹಾಸದ ಅಧ್ಯಯನ ಆರಂಭಿಸಿಯಾಗಿತ್ತು. ಅಮೀರನ ಪ್ರಸ್ತಾವದ ಬಗ್ಗೆ ಪ್ರೊಫೆಸರ್ ಶಾಸ್ತ್ರಿಯೊಡನೆ ಚರ್ಚಿಸಿ ಬರುವ ಲಕ್ಷ್ಮಿ, ತನ್ನ ಅಪ್ಪನ ಪುಸ್ತಕ ಸಂಗ್ರಹದಲ್ಲಿ ಟಿಪ್ಪಣಿಗಳಲ್ಲಿ ಟಿಪ್ಪು ಬಗ್ಗೆ ಏನಿದೆ ನೋಡಿ ಅವನೊಬ್ಬ ಕ್ರೂರಿ, ಪರಮತ ದ್ವೇಷಿ, ತಂತ್ರಗಾರ, ದೊರೆ ಎಂಬ ತೀರ್ಮಾನಕ್ಕೆ ಬರುತ್ತಾಳೆ. ಮತ್ತೆ ಗಂಡನಿಗೆ ಪತ್ರ ಬರೆಯುತ್ತಾಳೆ.

ಅವನನ್ನು ಕೆಲವು ಲೇಖಕರು, ಅದರಲ್ಲೂ ಕೆಲವು ಹಳೇ ಮೈಸೂರು ಸಂಸ್ಥಾನದ ಕನ್ನಡಿಗರು ವೈಭವೀಕರಿಸುವುದನ್ನು ನೋಡಿದರೆ ಸಾಹಿತಿಗಳು ಐತಿಹಾಸಿಕ ವಸ್ತುವನ್ನು ಮುಟ್ಟಿ ಅಪವಿತ್ರಗೊಳಿಸುವ ಹೇಸಿಗೆಯ ಸ್ವಾತಂತ್ರ್ಯಕ್ಕೆ ಮಿತಿ ಇರಬೇಡವೇ ಎನಿಸುತ್ತದೆ. ಹೀಗೆ ಆರಂಭಿಸಿ ಟಿಪ್ಪು ವಿರುದ್ಧ ಟೀಕೆ ಟಿಪ್ಪಣಿ ಮಾಡುತ್ತಾ, ಹಳೇ ಮೈಸೂರು ಪ್ರಾಂತ್ಯದಲ್ಲಿ ಅವನನ್ನು ಹಾಡಿಹೊಗಳುವ ಲಾವಣಿಗಳೇಕಿವೆ ಎಂಬುದಕ್ಕೂ ತನ್ನದೇ ಸಮಜಾಯಿಸಿ ನೀಡುತ್ತ ಮುನ್ನಡೆಯುತ್ತಾಳೆ.

ಇವತ್ತಿನ ಎಳಸು ಹಿಂದೂಗಳು ಮತ್ತು ಜಾತ್ಯತೀತ ವಾದಿಗಳು ಟಿಪ್ಪುವನ್ನು ಒಬ್ಬ ಧರ್ಮ ಸಹಿಷ್ಣು ಎಂದು ಬಿಂಬಿಸುತ್ತಿದ್ದರೂ, ಟಿಪ್ಪುವನ್ನು ಜಾತ್ಯಾತೀತ, ಪ್ರಗತಿಪರ, ಭಾರತದ ತಂತ್ರಜ್ಞಾನದ ಪಿತಾಮಹ ಎಂದೆಲ್ಲ ಚಿತ್ರಿಸಿ ನಾಟಕ ರಚಿಸಲು ಅವಳು ವಿರೋಧ ವ್ಯಕ್ತಪಡಿಸುತ್ತಾಳೆ. ಆದರೆ ಅಮೀರ್ ಕೇಳಿದ್ದು ಟಿಪ್ಪು ಮತ್ತು ಅಕ್ಬರ್ ಮಹಾನ್ ಬಗ್ಗೆ. ಆಯಿತು, ಅಕ್ಬರನ ಬಗ್ಗೆ ಲಕ್ಷ್ಮಿ ಹೇಳುವುದೇನಿದೆ ಎಂದು ಗಮನಿಸಿದರೆ ಏನೂ ಇಲ್ಲ ಎಂದೆನಿಸುತ್ತದೆ. ಮೊಘಲರ ಇತಿಹಾಸಕ್ಕೆ ಕೈಹಾಕಿದ ಮೇಲೆ ಅಕ್ಬರನನ್ನು ಹೊರಗಿಡಲು ಸಾಧ್ಯವಿಲ್ಲ. ಇದು ಭೈರಪ್ಪನವರಿಗೂ ಗೊತ್ತು ಆದರೆ ಅವರು ಈ ಕೃತಿಯಲ್ಲಿ ಕಟ್ಟುತ್ತಿರುವ ದಾಳಿಕೋರ ಮುಸ್ಲಿಮನ ಚಿತ್ರಣದ ಎರಕದಲ್ಲಿ ಅಕ್ಬರನ ವ್ಯಕ್ತಿತ್ವ ಕೂರುತ್ತಿಲ್ಲ. ಆದರೆ ಅವನ ಗೊತ್ತು ಗುರಿ, ರಾಜಕೀಯ, ತುಮುಲಗಳನ್ನೇನಾದರೂ ಚರ್ಚಿಸಿ ಹೊರಟರೆ, ಭೈರಪ್ಪನವರಂಥವರೂ ಅಕ್ಬರನ ಪರ ಮಾತನಾಡಬೇಕಾಗುತ್ತದೆ. ಹೊಗಳಬೇಕಾಗುತ್ತದೆ. ಇದೀಗ ಅವರಿಗೆದುರಾದ ದೊಡ್ಡ ಸಂದಿಗ್ಧ. ಅದಕ್ಕೆ ಭೈರಪ್ಪ ಯಾವ ದಾರಿ ಹುಡುಕುತ್ತಾರೆ ತಾವು ಒಂದು ಮಾತೂ ಆಡದೆ–ಲಕ್ಷ್ಮಿಯ ಒಳ ಕಾದಂಬರಿಯಲ್ಲಿ ಬರುವ ಸಮಕಾಲೀನ ಚರಿತ್ರಕಾರ ಹಮದುಲ್ಲಾಹನ ಬಾಯಲ್ಲಿ ಹೀಗೆ ಹೇಳಿಸುತ್ತಾರೆ.

ಈ ಮೊಘಲ್ ಸಾಮ್ರಾಜ್ಯದಲ್ಲಿ ಒಂದು ಗುಂಪು ಇದೆ. ಅಕ್ಬರನನ್ನು ಹೊಗಳುವುದು. ಅವನೇ ಆದರ್ಶದ ಬಾದಶಹ ಅನ್ನುವುದು. ಎಲ್ಲ ಧರ್ಮಗಳ ಮೂಲತತ್ವಗಳನ್ನೂ ಹುಡುಕಿ ಅವುಗಳಲ್ಲಿರುವ ಭೇದಗಳನ್ನು ತೊಡೆದು, ಸಮಾನಾಂಶಗಳನ್ನು ಎಲ್ಲರೂ ಅನುಸರಿಸಬೇಕು ಅನ್ನುದು. ಫರಂಗಿಯೋರ ಜತೆ ಬೈಬಲನ್ನು, ಫಾರ್ಸಿಗಳ ಜತೆ ಝೆಂಡ್ ಆವಸ್ತೆವನ್ನು, ಯಹೂದಿಗಳ ಜತೆ ತಾಲ್ಮುದನ್ನು ಹಿಂದೂಗಳ ಜತೆ ವೇದಾಂತವನ್ನು ಚರ್ಚಿಸುವುದು. ಈ ದೇಶದ ಪ್ರಧಾನ ಜನಸಂಖ್ಯೆಯ ಧರ್ಮವಾದ ವೇದ ವೇದಾಂತ, ಆಳುವವರ ಧರ್ಮವಾದ ಇಸ್ಲಾಂ ಇವುಗಳ ನಡುವೆ ಸಾಮರಸ್ಯ ಕಂಡು ಹಿಡಿಯೂದು; ಯಾರು ಯಾರನ್ನೂ ಧರ್ಮಾಂತರಿಸಬಾರದು, ಧರ್ಮಾಂತರಿತವಾದೋರು ಅಪೇಕ್ಷೆಪಟ್ಟರೆ ಮೂಲ ಧರ್ಮಕ್ಕೆ ಹಿಂತಿರುಗಬಹುದು, ಜೆಸಿಯಾ ತಲೆಗಂದಾಯವಿಲ್ಲ; ಹಿಂದೂಗಳಿಗೆ ತೀರ್ಥಯಾತ್ರೆಯ ಸುಂಕವಿಲ್ಲ. ಬೇಕಾದವರು ಸ್ವಂತ ಖರ್ಚಿನಲ್ಲಿ ದೇವಸ್ಥಾನ ಕಟ್ಟಿಸಿಕೊಳ್ಳಲಿ , ಹಳೇ ದೇವಸ್ಥಾನಗಳ ದುರಸ್ತಿ ಮಾಡಿಸಿಕೊಳ್ಳಲಿ; ಬಾದಶಹ ಆಗಿದೀನಿ ಅಂತ ಹೀಗೆಲ್ಲ ಮಾಡಿದರೆ ಇಸ್ಲಾಂ ಉಳಿಯುವುದು ಹೇಗೆ? ಬೆಳೆಯುವುದು ಹೇಗೆ? ಅಕ್ಬರ ಅಂದರೆ ಧರ್ಮಲಂಡ. ತಾನು ಮದುವೆಯಾದ ಹಿಂದೂ ಹೆಂಡತಿಯರು ಅವರ ಅವರ ಮನೆಗಳಲ್ಲಿ ಹಿಂದೂ ದೇವತೆಗಳ ಪೂಜೆ ಮಾಡುಕ್ಕೆ ಅವರ ವಾಸದ ಮನೇನ ಹಿಂದೂ ವಾಸ್ತುಶಿಲ್ಪದಂತೆ ಕಟ್ಟಿಸಿಕೊಳ್ಳುಕ್ಕೆ ಅವಕಾಶ ಮಾಡಿಕೊಟ್ಟಿದ್ದ. ರಾಜಕುಟುಂಬದಲ್ಲೇ ಇಸ್ಲಾಮಿನ ಪರಿಶುದ್ಧಿ ಉಳಿಯದಿದ್ದರೆ ರಾಜ್ಯದಲ್ಲಿ ಹೇಗೆ ಉಳಿಯಬೇಕು? ಅವನು ನರಕಕ್ಕೆ ಹೋಗುವುದು ಖಂಡಿತ. ಇದು ಸಹಿತ ಎಂಥ ಕುತಂತ್ರ!

ಅಕ್ಬರನ ಧರ್ಮಾತೀತ ಔದಾರ್ಯಕ್ಕೆ ಭೈರಪ್ಪ ದಯಪಾಲಿಸುವುದು ಹಮದುಲ್ಲಾಹ್ ಬಾಯಿನ ಇಂಥ ನಿಂದಾಸ್ತುತಿ ಧಿಕ್ಕಾರದ ಗುಣಗಾನ ಮಾತ್ರ! ಅಲ್ಲಿಗೆ ಅಕ್ಬರ–ಕಾದಂಬರಿಕಾರ ಭೈರಪ್ಪ ಎದುರುಗೊಂಡು ಉತ್ತರಿಸಬೇಕಾದ, ತೀರ್ಮಾನಗಳನ್ನು ಮರುಪರಿಶೀಲಿಸಿಕೊಳ್ಳಬೇಕಾದಾಗ ಸವಾಲಾಗಿ ಉಳಿಯುವುದಿಲ್ಲ. ಒಟ್ಟಿನಲ್ಲಿ ಇಸ್ಲಾಮಿನ ಚೌಕಟ್ಟಿನಲ್ಲೇ ಮನುಷ್ಯನ ಸಮಾನತೆಯನ್ನು ಮತ್ತು ಪ್ರೇಮ ಭಕ್ತಿಗಳ ಮಾರ್ಗವನ್ನು ಎತ್ತಿ ಹಿಡಿದ ಪರಂಪರೆಯನ್ನೇ ಕ್ಷೀಣ ಭಿನ್ನಮತೀಯ ದನಿ ಮಾತ್ರವಾಗಿ ಬಿಂಬಿಸುವುದು ಭೈರಪ್ಪನವರಿಗೆ ಸಾಧ್ಯವಾಗುತ್ತದೆ.

ಕಾಶಿಯಲ್ಲಿ ವಿಶ್ವನಾಥ ಮಂದಿರ ಭಗ್ನಗೊಳ್ಳುವುದನ್ನು ಕಣ್ಣಾರೆ ಕಂಡರೆ ತನ್ನ ಇಸ್ಲಾಂ ನಿಷ್ಠೆ ಭದ್ರಗೊಳ್ಳಬಹುದೆಂದು ಜೊತೆಯಲ್ಲಿ ಬರುವ ಖ್ವಾಜಾ ಜಹಾನನಿಗೆ ಹಮದುಲ್ಲಾಹ್ ಹೇಳುವುದು:

ಅಕ್ಬರನ ಕಾಲದಲ್ಲಿ ಈಗಿರುವ ವಿಶ್ವನಾಥ ಮಂದಿರವನ್ನು ಕಟ್ಟಿದ್ದು, ಮಂದಿರ ಕಟ್ಟಲು ಸರ್ಕಾರದ ಹಣ ಕೊಡುವುದಿಲ್ಲ; ಜನಗಳು ತಮ್ಮ ಹಣ ಹಾಕಿಕೊಂಡು ತಮಗೆ ಬೇಕಾದ ಮಂದಿರ ಕಟ್ಟಿಕೊಂಡರೆ ಸರ್ಕಾರದ ಆಕ್ಷೇಪವಿಲ್ಲ ಅಂತ ಹುಕುಂ ಮಾಡಿದ್ದ, ಧರ್ಮಲಂಡ, [illegible], ಪಾಪಿ ಅವನ ಜೀವ ಇನ್ನೂ ನರದಕದ ಬೆಂಕಿಯಲ್ಲಿ ಬೇಯುತ್ತಿದೆ. ಅವು ಸತ್ತಿದ್ದು ಅಲ್ ಹಿಜಿರಾ ೧೦೧೫ರಲ್ಲಿ, ಇದು ೧೦೭೯. ಅಂದರೆ ೬೪ ವರ್ಷದಿಂದ ಬೇಯುತ್ತಿದೆ, ಮುಂದೆಯೂ ಬೇಯುತ್ತಲೇ ಇರುತ್ತದೆ. ಅನ್ನುವಾಗ ಹಮದುಲ್ಲಾಹರ ಮುಖ ರೋಷದಿಂದ ಉರಿಯುತೊಡಗಿತು.

ಕಾಶಿಯ ಧ್ವಂಸವನ್ನು ಅಷ್ಟು ಚಿತ್ತವತ್ತವಾಗಿ ಬಣ್ಣಿಸುವ ಲಕ್ಷ್ಮಿ ಅಥವಾ ಭೈರಪ್ಪ, ಮಂದಿರ ಕಟ್ಟಿಸಲು ಸಾಧ್ಯವಾದದ್ದು ಅಕ್ಬರನ ಕಾಲದಲ್ಲಿ ಎಂಬುದನ್ನು ಹಮದುಲ್ಲಾಹನ ಮತಾಂಧ ರೋಷದ ಮೂಲಕ ಮಾತ್ರ  ತೋರಿಸಿ ಕೈ ತೊಳೆದುಕೊಳ್ಳುತ್ತಾರೆ.

ಲಕ್ಷ್ಮಿ ಹಂತ ಹಂತವಾಗಿ ಹಿಂದೂ ಧರ್ಮ ಎಂದು ಭೈರಪ್ಪನವರು ಬಿಂಬಿಸಲೆತ್ನಿಸುವ ಬ್ರಾಹ್ಮಣ್ಯದ ತೆಕ್ಕೆಗೆ ಸೇರುತ್ತಾಳೆ. ಮೊದಲಿಗೆ ಹಣೆಯಲ್ಲಿ ಬಿಂದಿ ಇಟ್ಟುಕೊಳ್ಳುತ್ತಾಳೆ ಮತ್ತೆ ಅಧ್ಯಯನಕ್ಕೆ ತೊಡಗಿ ಅಪ್ಪನ ಇತಿಹಾಸ ದರ್ಶನವನ್ನು ಕಂಡುಕೊಳ್ಳುತ್ತಾಳೆ. ಅವಳ ಅಧ್ಯಯನ ನಡೆಯುವುದೂ  ಅಪ್ಪ ಇಟ್ಟುಕೊಂಡಿದ್ದ ವ್ಯಾಸ ಪೀಠದ ಮೇಲೆ ಅನ್ನು ಮೂಲಕ, ಅದು ಕೂಡ ಒಂದು ಧಾರ್ಮಿಕ ಆಚರಣೆ ಎಂದು ಸೂಚಿಸುತ್ತಿದ್ದಾರೆ. ಅಪ್ಪನ ಇತಿಹಾಸ ದರ್ಶನಕ್ಕೆ ಒಡ್ಡಿಕೊಳ್ಳುವ ಲಕ್ಷ್ಮಿ ತನ್ನ ಬೇರುಗಳ ಪ್ರಸ್ತಾಪ ಮಾಡುತ್ತಾಳೆ.

ನಾನು ಮೂರುವರೆ ವರ್ಷ ಅಧ್ಯಯನ ಮಾಡಿದ ಈ ಮನೆಯನ್ನು ಪೂರ್ತಿಬಿಡಲು ಸಾಧ್ಯವಿಲ್ಲವೆಂದು ಮನಸ್ಸಿನಲ್ಲೆ ನಿರ್ಧರಿಸಿದ್ದೆ. ಇದು ನನ್ನ ಮನೆ, ನನ್ನ ಬೇರು ಎಂಬ ಭಾವ ಗಟ್ಟಿಯಾಗಿ ಬೆಳೆದಿತ್ತು. ಲಕ್ಷ್ಮಿ ಕಾಶಿಗೆ ಪ್ರವೇಶಿಸಿದೊಡನೆ ಮೊದಲಿಗೆ ಕಾಣುವುದು ಮೊಘಲಸರಾಯಿಂದ  ಬರುವಾಗ ಕಾಶಿಗೆ ಐದಾರು ಮೈಲಿ ದೂರದಲ್ಲೆ ಇಡಿ ಕಾಶಿಯನ್ನೇ ದಟ್ಟವಾಗಿ ಆವರಿಸಿ ಕಾಶಿಯ  ಆಕಾಶವನ್ನು ದಟ್ಟವಾಗಿ ಕವಿದು; ವಿಶ್ವನಾಥನ ಸ್ಥಾನದ ಗೋಡೆ ತಳಹದಿಗಳ ಮೇಲೆ ಮಸೀದಿ ನಿಂತಿರುವ ಗ್ಯಾನವ್ಯಾಪಿ ಮಸೀದಿ. ಔರಂಗಜೇಬನ ಧಾರ್ಮಿಕ ವಿಜೃಂಭಣೆ. ಈಗ ಅದರ ಸುತ್ತ  ಎಂಥ ನಿಷ್ಣಾತನೂ ಹಾರಿ ಒಳ ಹೋಗಲಾರದಂಥ ಹನ್ನೆರಡು ಅಡಿ ಎತ್ತರದ ಮುಟ್ಟಿದರೆ ಕರುಳು ಬಗೆದುಬಿಡುವಷ್ಟು ಮೊನಚಾದ ಮುಳ್ಳುಗಳ ತಂತಿ ಬೇಲಿ. ಕಾಶಿಯ ಎಲ್ಲೆಲ್ಲಿಯೂ ಹತ್ತಿ ಇಳಿದು ನೆಗೆದು ಬಾಳೆ ಹಣ್ಣುಗಳನ್ನು ಕಿತ್ತುಹಾರುವ ಕೋತಿಗಳು ಕೂಡ ನುಸಿಯಲಾರದಷ್ಟು ದಟ್ಟವಾದ ಮುಳ್ಳು ತಂತಿಗಳ ಹೆಣಿಗೆ. ಗುಂಡು ತುಂಬಿದ ಬಂದೂಕನ್ನು ಉಡಾಯಿಸುವ ಭಂಗಿಯಲ್ಲಿ ಹಿಡಿದು ಯುದ್ಧ ಸನ್ನದ್ಧ ಶತ್ರು ರಾಜ್ಯದ ಗಡಿಯಲ್ಲಿ ನಿಲ್ಲುವಂತೆ ನಾಲ್ಕು ಅಡಿಗೊಬ್ಬರಂತೆ ಸಮವಸ್ತ್ರ ತೊಟ್ಟು ನಿಂತಿರುವ ಮಿಲಿಟರಿ ಪಡೆ. ನೋಡಿದರೆ ವಿಶಾಲಾಕ್ಷಿ ಸುಬ್ಬಣ್ಣರ ಎದೆ ಝಲ್ ಎಂದಿತು. ಎಲ್ಲವನ್ನು  ಓದಿ ತಿಳಿದಿದ್ದರೂ ಲಕ್ಷ್ಮಿಯ ಬುದ್ಧಿಗೆ ಈ ಚಿತ್ರದ ಅರ್ಥ ತಕ್ಷಣ ಆಗಲಿಲ್ಲ.

ಔರಂಗಜೇಬನು ವಿಶ್ವನಾಥ ಮಂದಿರವನ್ನು ಧ್ವಂಸಮಾಡಿ ಕಟ್ಟಿಸಿದ ಮಸೀದಿಯನ್ನು ಬಂದೂಕುಧಾರಿ ಸಿಪಾಯಿಗಳು ಬೇಲಿ ಕಟ್ಟಿಕೊಂಡು ರಕ್ಷಿಸುತ್ತಿದ್ದಾರೆ. ಎಂದು ಶರ್ಮಾ ವಿವರಿಸಿದ. ಇನ್ನೊಂದೆಡೆ ಲಕ್ಷ್ಮಿ ದಾಖಲಿಸುವುದು ಆಂಗ್ಲರು ತಮ್ಮ ಅಧಿಕಾರದ ಉಳಿವಿಗಾಗಿ ಮಾಡಿದ ಧಾರ್ಮಿಕ ತೋಲನದ ಸೂತ್ರವನ್ನು ಸ್ವತಂತ್ರ್ಯ ಭಾರತದ ಅಧಿಕಾರವನ್ನು ಹಿಡಿದ ರಾಜಕೀಯ ನಾಯಕರು ಸಂವಿಧಾನದ ಪವಿತ್ರ ನಿಯಮವೆಂದು ಘೋಷಿಸಿದರು. ಇದರಿಂದ ತಾವು ನಾಶಪಡಿಸಿದ ದೇವಸ್ಥಾನದ ಸ್ಥಳಗಳನ್ನು ಹಿಂತಿರುಗಿಸದಿರಲು ಕಾನೂನಿನ ಹಾಗೂ ಸಂವಿಧಾನದ ಬಲವೂ ತಮಗುಂಟೆಂದು ಮುಸಲ್ಮಾನರು ಪಟ್ಟು ಹಿಡಿಯುವಂತಾಯಿತು.[೫]

ಅದಕ್ಕಾಗಿ ಇಸ್ಲಾಂ ಮತ್ತು ಕ್ರೈಸ್ತ ಧರ್ಮಗಳು ತಮ್ಮ ನಂಬಿಕೆಗಳನ್ನು ಇಡೀ ಪ್ರಪಂಚದ ಮೇಲೆ ಹೇರುತ್ತಿರುವ ಸಾಮ್ರಾಜ್ಯಶಾಹಿಗಳೆಂದು ಈಗ ಮನಸ್ಸಿನಲ್ಲಿ ಬೇರೂರಿತು. ತನ್ನ ಹುಟ್ಟಿನ ಹಿಂದೂ ಧರ್ಮದ ಕರ್ಮಕಲಾಪಗಳನ್ನು ಸ್ವತಃ ಆಚರಿಸಲು ಒಗ್ಗುತ್ತಿರಲಿಲ್ಲ. ಆದರೂ ವಿಶ್ವನಾಥ ಮಂದಿರವನ್ನು ತುಳಿದು ಹೂಂಕರಿಸುತ್ತಿರುವ ಈ ಗ್ಯಾನವ್ಯಾಪಿ ಮಸೀದಿಗೆ ತನ್ನ ಆಧ್ಯಾತ್ಮಿಕ ಧಿಕ್ಕಾರವನ್ನು ತೋರಿಸಲು ವಿಶ್ವನಾಥ ಲಿಂಗಕ್ಕೆ ಒಂದು ತಂಬಿಗೆ ಗಂಗಾಜಲ, ಒಂದು ಎಸಳು ಹೂವು ಹಾಕುವುದು ಒಂದು ವಿಧಾನವೆಂದು ಮನಸ್ಸು ಹೇಳುತ್ತಿತ್ತು.

ಇವಳು ಹೀಗೆ ಬ್ರಾಹ್ಮಣ್ಯವನ್ನು ಅಪ್ಪಿಕೊಳ್ಳುವಾಗಲೇ ತನ್ನ ಕಥಾನಾಯಕ ಖ್ವಾಜಾ ಜಹಾನನನ್ನೂ ಅದೇ ದಿಕ್ಕಿನಲ್ಲಿ ನಡೆಸಿಕೊಂಡು ಹೋಗುತ್ತಾಳೆ. ಅವನು ಕಾಶಿಯ ಧ್ವಂಸವನ್ನು ನೋಡಲು ಹುಮ್ಮಸ್ಸಿನಿಂದ ಬಂದವನಾದರೂ, ಧಾರ್ಮಿಕ ಸಂಕಟವನ್ನು ಅನುಭವಿಸತೊಡಗುತ್ತಾನೆ. ಬೆಳಗಿನಿಂದ ನನಗೆ ಹೊಟ್ಟೆಯಲ್ಲಿ ಇರಿಸುಮುರುಸಾಗುತ್ತಿತ್ತು. ಹೊಟ್ಟೆಯೊಳಗೆ ಸಂಕಟ ಕಾಣುತ್ತಿತ್ತು. ಫಿರಂಗಿಯ ದಢಂ ದಢಂ ಗುಂಡು ಬಡಿದಾಗಲೆಲ್ಲ ಹೊಟ್ಟೆಯ ಸಂಕಟ ಮನಸ್ಸಿನ, ಇಡೀ ಶರೀರದ ಸಂಕಟವಾಗಿ ಹೋಗುತ್ತಿತ್ತು.

ಗಂಗಾ ನದಿಯ ದಡದಲ್ಲಿ ಶ್ವಾಜಾ ಜಹಾನನು ತೊಳಲಾಟದ ನಡುವೆ ಅವಧೂತನ ಭೇಟಿಯಿಂದ ಅವನ ಮನಸ್ಸು ಹಿಂದೂ ಧರ್ಮದ ಕಡೆ ಮರಳಿ ಸೆಳೆಯುತ್ತದೆ ಮತ್ತು ಇವರಿಬ್ಬರ ಪಯಣಕ್ಕೆ ಸಂವಾದಿಯಾಗಿ, ಗಂಗಾನದಿಯು ಇಬ್ಬರಿಗೂ ಹಿಂದೂತ್ವದ ಮಹಾರೂಪಕವಾಗಿ ಗೋಚರವಾಗುತ್ತದೆ. ಇದು ಸದ್ದು ಮಾಡುವ ನದಿಯಲ್ಲ. ನಿಶ್ಚಲವಾಗಿ ಒಳಗೆ ಚಲಿಸುವ ಸಂಸ್ಕೃತಿ. ಎಷ್ಟು ಮತಗಳು, ಎಷ್ಟು ಪಂಥಗಳು, ಎಷ್ಟು ತರ್ಕ ವ್ಯಾಖ್ಯಾನಗಳು, ಎಷ್ಟು ಬಗೆಯ ವಾಕ್ಯಾರ್ಥಗಳು, ದೇವರನ್ನು ನಂಬುವ, ನಂಬದಿರುವ, ನಂಬಿದವರನ್ನು ಆದರಿಸುವ, ಧರ್ಮದ ಮೂಲವನ್ನು ಹುಡುಕುವ ರೂಪದಲ್ಲಿ ಲಕ್ಷ್ಮಿ ಗ್ರಹಿಸಿದರೆ, ಖ್ವಾಜಾ ಜಹಾನ್ ಪಾಲಿಗೆ ಗಂಗೆ ಮಾತ್ರ ಕಾಶಿಯಲ್ಲಿ ಏನಾಗುತ್ತಿದೆ ಎಂಬ ಲಕ್ಷ್ಯವೇ ಇಲ್ಲದಂತೆ ಹರಿಯುತ್ತಿದ್ದಾಳೆ.

ಖ್ವಾಜಾಜಹಾನ ತನ್ನ ಬೇಗಮಳ ಸಂದೇಶ ಹೊತ್ತು ಅಮೀರರ ಮಹಲಿಗೆ ಬಂದಾಗ ತಾನು ಸತ್ತು ಹೋಗಿದ್ದಾಳೆಂದು ಭಾವಿಸಿದ್ದ ಹೆಂಡತಿ ಶ್ಯಾಮಲಾದೇವಿಯನ್ನು ಆ ಮಹಲಿನ ತೊತ್ತಾಗಿ ಕಾಣುತ್ತಾನೆ. ಹೇಗಾದರೂ ಅವಳನ್ನು ಭೇಟಿಯಾಗಿ ಮಾತನಾಡಬೇಕೆಂದು ಹಾತೊರೆಯುವಾಗ ಒಂದು ಸಂದರ್ಭ ಒದಗುತ್ತದೆ. ಆ ವೇಳೆಗಾಗಲೇ ಅವಳು ತಬಸ್ಸುಂ ಆಗಿ ಧರ್ಮಾಂತರಗೊಂಡು ಅಮೀರರ ರಖಾವ್ ಆಗಿ ಪರಿವರ್ತನೆಗೊಂಡಿದ್ದಾಳೆ. ಬೇಗಂ ಕೃಪೆದೋರಿ ಮಹಲಿನ ಕೊಟ್ಟಿಗೆಯಲ್ಲಿ ಅವರಿಬ್ಬರ ಭೇಟಿಗೆ ಅವಕಾಶ ಮಾಡಿಕೊಡುತ್ತಾಳೆ. ಬದುಕಿನ ಜ್ವಾಲೆಗಳಿಗೆ ಮೈಯೊಡ್ಡಿಕೊಂಡು ಬಂದ ಗಂಡ ಹೆಂಡತಿ ವರ್ಷಗಳ ಮೇಲೆ ಒಬ್ಬರನ್ನೊಬ್ಬರು ನೋಡುತ್ತಿದ್ದಾರೆ. ಆ ಮಿಲನ ಎಂಥ ಹೃದಯವಿದ್ರಾವಕ ಸಂದರ್ಭವಾಗಿರಬಹುದು. ಅವರಿಬ್ಬರ ಮನಸ್ಸಿನಲ್ಲಿ ಏನೆಲ್ಲ ಭಾವಾವಿಷ್ಟ ಹೊಯ್ದಾಟಗಳಿರಬೇಕು. ಇದು ಯಾವುದೂ ಭೈರಪ್ಪನವರು ಲೆಕ್ಕಿಸುವುದಿಲ್ಲ. ಅಥವಾ ಶೋಧಿಸುವುದಿಲ್ಲ.

ವರ್ಷಗಳ ಮೇಲೆ ಗಂಡ ಹೆಂಡತಿ ಭೇಟಿಯಾಗಿದ್ದಾರೆ, ಆದರೆ ಅವರ ಮನಸ್ಸುಗಳಲ್ಲಿ ಏನು ಅನ್ನಿಸಿರಬಹುದು ಇದು ಎಂಥಹ ಭೇಟಿ ಅವರು ಯಾವ ರೀತಿ ಮಾತುಗಳು ಪ್ರಾರಂಭಿಸುತ್ತಾರೆ, ಅವರಲ್ಲಿ ಎಷ್ಟು ನೋವಿದೆ ಎಂಬುದನ್ನು ಭೈರಪ್ಪನವರು ಶೋಧಿಸುವುದಿಲ್ಲ. ಅವರು ಅವರಿಬ್ಬರನ್ನು ಭೇಟಿ ಮಾಡಿಸಿದ್ದೆ ಬೇರೆ ಉದ್ದೇಶಕ್ಕಾಗಿ ಅಂದರ ದನದ ಕೊಟ್ಟಿಗೆ ನೆಪಮಾತ್ರ ಕೊಟ್ಟಿಗೆಯಲ್ಲಿ ಸಾಲಿಗೆ ಕಟ್ಟಿದ ಹಸುಗಳು ಬಾಯಲ್ಲಿ ಹಿಂಡಿ ತಿನ್ನುತ್ತಿದ್ದವು.

ಹೆಚ್ಚು ಹಾಲು ಕೊಡಲೆಂದು ಹಿಂಡಿ ತಿನ್ನಿಸುತ್ತಿದ್ದರೋ ಅಥವಾ ಕಡಿದು ಮಾಂಸ ಮಾಡಲು ಕೊಬ್ಬಿಸುತ್ತಿದ್ದರೋ ತಿಳಿಯಲಿಲ್ಲ. ವರ್ಷಗಳ ನಂತರ ಭೇಟಿಯಾದ ಹೆಂಡತಿಯ ಕಡೆಗೆ ಅವನ ಲಕ್ಷ್ಯವಿಲ್ಲ. ಅದನ್ನು ಬಿಟ್ಟು ಆತ ಗೋಮಾಂಸ ಭಕ್ಷಣೆಯ ಪ್ರಶ್ನೆಯಲ್ಲಿ ತಲ್ಲೀನನಾಗಿದ್ದಾನೆ. ಇದನ್ನು ಹೇಳಲು ಭೈರಪ್ಪನವರು ಅವರಿಬ್ಬರನ್ನು ದನದ ಕೊಟ್ಟಿಗೆಯಲ್ಲಿ ಭೇಟಿಮಾಡಿಸಿದ್ದಾರೆ.

ಲಕ್ಷ್ಮಿ ತನ್ನನ್ನು ಬಿಟ್ಟುಹೋದಮೇಲೆ ಅಮೀರ್ ಎಳೆ ಪ್ರಾಯದ ಎರಡನೇ ಹೆಂಡತಿ ಕಟ್ಟಿಕೊಂಡಿದ್ದಾನೆ. ಕಟ್ಟಿಕೊಳ್ಳುವಾಗ ಇಲ್ಲದ ಅಳುಕು ಹೆಂಡತಿ ಗರ್ಭಿಣಿಯಾದಾಗ ಕಾಡಿಸತೊಡಗಿದೆ ಮೂವತ್ತೆರಡು ವರ್ಷದ ಮಗನ್ನಿಟ್ಟುಕೊಂಡು ಮೊಮ್ಮಗನನ್ನು ಆಡಿಸುವ ವಯಸ್ಸಿನಲ್ಲಿ ನನ್ನದೇ ಮಗುವೆಂದು ಹೇಳಿಕೊಳ್ಳುತ್ತಾ. ತೆಗೆಸಿಹಾಕಿಬಿಡಾಣ ಎಂದರೆ ಅವಳ ಹಟ. ತಾನು ತಾಯಿಯಾಗಬೇಕೆಂಬ ಸ್ವಾಭಾವಿಕ ಬಯಕೆ ಮಾತ್ರವಲ್ಲ. ಕುಟುಂಬ ಯೋಜನೆಯೇ ಪಾಪವೆಂಬ ಬೋಧೆಯನ್ನು ತಲೆಗೆ ತುಂಬಿಕೊಂಡ ತಂದೆ ಹುಟ್ಟಿಸಿದ ಹನ್ನೊಂದು, ಸತ್ತ ಐದು ಮಕ್ಕಳು ಉದಾಹರಣೆ.

ಅಮೀರ ಎರಡನೆ ಮದುವೆಯಾದ ವಿಷಯ ಸೌದಿಯಲ್ಲಿದ್ದ ಲಕ್ಷ್ಮಿಯ ಮಗ ನಜೀರಗೆ ಗೆಳೆಯ ಇಮ್ತಿಯಾಜ್‌ನಿಂದ ತಿಳಿಯುತ್ತದೆ. ಫೋನ್ ಮಾಡಿದಾಗ, ಇಮ್ತಿಯಾಜ್ ಹೇಳುತ್ತಾನೆ, ಅಸಲಿ ಮುಸಲ್ಮಾನ ಅಲ್ಲದ ಬೇರೆ ಜಾತಿ ಹೆಣ್ಣನ್ನು ಎಷ್ಟು ಕನವರ್ಟ್ ಮಾಡಿ ಮದುವೆಯಾದರೂ ಹಾಗೇನೆ ಅಂತ ನಮ್ಮೋರೆಲ್ಲ ಮಾತಾಡ್ಕೋತಿದ್ದಾರೆ ಅಂತ ಅವನ ಗೆಳೆಯ ಹೇಳುತ್ತಾನೆ.

ಛಿದ್ರಗೊಳಿಸುತ್ತಿರುವ ಜಾತಿಯ, ಮತೀಯ, ದುಷ್ಟಶಕ್ತಿಗಳನ್ನು ಬೇರು ಸಹಿತ ಸುಟ್ಟು ಭಸ್ಮಮಾಡದಿದ್ದರೆ ದೇಶ ಉಳಿಯುವುದಿಲ್ಲವೆಂಬ ಪರಮ ಸತ್ಯ ನಿಮಗೆಲ್ಲ ಗೊತ್ತಿದೆ ಎಂಬ ಮಂತ್ರಿ ಭಾಷಣದೊಂದಿಗೆ ಆರಂಭವಾಗುವ, "ರಾಷ್ಟ್ರೀಯ ಭಾವೈಕ್ಯವನ್ನು ಸಾಧಿಸಲು ಸರ್ಕಾರವು ಕರೆದ ದೇಶದ ಬುದ್ಧಿಜೀವಿಗಳ, ಕಲಾವಿದರ ಶಿಕ್ಷಣವೇತ್ತರ, ವಿದ್ವಾಂಸರ, ಇತಿಹಾಸ ತಜ್ಞರ ಮೂರು ದಿನಗಳ ಸಭೆ"ಯಲ್ಲಿ ಲಕ್ಷ್ಮಿ ತನ್ನ ಕೋಮುವಾದಿ ಪಾಂಡಿತ್ಯವನ್ನು ಆಧಾರ ಸಹಿತ ಮಂಡಿಸುವ ಸಂದರ್ಭದಲ್ಲಿ ಭೈರಪ್ಪನವರ ವ್ಯಂಗ್ಯ ಯಾವ ರೀತಿಯಾಗಿತ್ತು ಎಂಬುದನ್ನು ಗಮನಿಸಬಹುದು.

ಸಭೆಯ ನಂತರ ಡಾ॥ ರಾಜಧಾನ್ ಎಂದೊಬ್ಬ ಪ್ರಭೃತಿ–ಅಲಹಾಬಾದ್ ವಿಶ್ವವಿದ್ಯಾಲಯದಲ್ಲಿ ಇತಿಹಾಸದ ರೀಡರ್–ಲಕ್ಷ್ಮಿಯ ಬಳಿ ಬಂದು ನಿನ್ನೆ ನಿಮ್ಮ ಮಾತುಗಳು ಫಸ್ಟ್‌ಕ್ಲಾಸ್. ನಿಜವಾದ ಗಂಡಸರು ನೀವು. ಎಂದು ಹೊಗಳುತ್ತಾನೆ. 'ಇಲ್ಲಿ ಹಾಗನ್ನವವರು, ಸಭೆಯಲ್ಲೇಕೆ ನನ್ನನ್ನು ಸಮರ್ಥಿಸಲಿಲ್ಲ? ಎಂದು ಅವಳು ಕೇಳಿದರೆ– 'ನೀವೆ ಹೇಳಿದಿರಲ್ಲ, ಮುಸ್ಲಿಂ ಆಳ್ವಿಕೆಯು ಭಾರತದ ಗಂಡಸರನ್ನೆಲ್ಲ ಶಿಖಂಡಿಗಳಾಗಿ ಮಾಡಿತು ಅಂತ ಎಂದ ಅವರು ತಮ್ಮ ಜೋಕಿಗೆ ತಾವೇ ನಕ್ಕರು. ಎರಡನೇ ಸಭೆ ನಡೆಯುವಾಗ ಲಕ್ಷ್ಮಿಗೆ ಆಹ್ವಾನವಿಲ್ಲ;

ಮುಸ್ಲಿಂ ದೊರೆಗಳು ಧರ್ಮಾಂದರು ಅನ್ನುವುದಕ್ಕೆ 'ಜಾತಿವಾದಿ' ಇತಿಹಾಸಕಾರರು ಔರಂಗಜೇಬನನ್ನು ಪ್ರಮುಖ ಉದಾಹರಣೆಯಾಗಿ ಎತ್ತಿ ಹಿಡೀತಾರಲ್ಲವೆ? ಅವನು ಧರ್ಮಾಂಧನಲ್ಲ, ಕಟ್ಟುನಿಟ್ಟಾದ ಜಾತ್ಯತೀತ ಆಡಳಿತಗಾರ ಅಂತ ಚಿತ್ರಿಸುವಂಥ ಹತ್ತಾರು ಸಂಶೋಧನ ಲೇಖನಗಳನ್ನು ನಾಲ್ಕಾರು ಸಂಶೋಧನ ಗ್ರಂಥಗಳನ್ನು ಶೀಘ್ರವಾಗಿ ಬರೆಸಿ ಪ್ರಕಟಿಸಬೇಕು ಅಂತ ತೀರ್ಮಾನ ಮಾಡಿಕೊಂಡಿದ್ದಾರೆ. ಇನ್ನು ಒಂದೆರಡು ವರ್ಷದಲ್ಲಿ ಔರಂಗಜೇಬನ ಚಿತ್ರವೇ ಬದಲಾಗಿಬಿಡುತ್ತೆ ನೋಡಿಬೇಕಾದರೆ ಎಂದರು. ತಮ್ಮ ವಾದದ ಸಮರ್ಥನೆಗಾಗಿ ಭೈರಪ್ಪನವರಿಗೆ ನಿಜ, ಸುಳ್ಳು ಯಾವುದಾದರೂ ನಡೆಯುತ್ತದೆ ಎಂದರ್ಥ.

ಕಾದಂಬರಿಯ ಕೊನೆಗಂತೂ ಭೈರಪ್ಪನವರ ಕಲ್ಪನಾ ವಿಲಾಸ ಲಕ್ಷ್ಮಿಯ ದಿಗ್ವಿಜಯವನ್ನು ಸಾಧಿಸುವ ಕಡೆ ಅಂಕೆಯಿಲ್ಲದ ಕುದುರೆಯಂತೆ ಓಡತೊಡಗುತ್ತದೆ. ಇದೇ ರಾಷ್ಟ್ರೀಯ

ಸಮಾವೇಶ ಆದ ಮೇಲೆ ಲಕ್ಷ್ಮಿ ತನ್ನ ದೃಷ್ಟಿಯನ್ನು ವಿಶದಪಡಿಸಿ ಎಲ್ಲ ಪತ್ರಿಕೆಗಳಿಗೂ ಲೇಖನ ಬರೆದು ಕಳಿಸುತ್ತಾಳೆ ಯಾರು ಅಚ್ಚು ಮಾಡುವುದಿಲ್ಲ, ಮಾಧ್ಯಮ ಸ್ವಾತಂತ್ರ್ಯವಿಲ್ಲದ ಇದೆಂಥ ಪ್ರಜಾಪ್ರಭುತ್ವ ಅನಿಸುವುದಿಲ್ಲವೆ? ಹಿಂದೂ ಪರಂಪರೆಯನ್ನು ಎತ್ತಿ ಹಿಡಿಯುದ ನವ್ಮ ಪ್ರೊಫೆಸರ್ ಶಾಸ್ತ್ರಿಗಳನ್ನು ಭಾವನಾತ್ಮಕವಾಗಿ ಔರಂಗಜೇಬ ವಂಶಜರು ಎನ್ನಬಹುದು ಎಂಬ ಅನುಮಾನವೂ ಅವಳಲ್ಲಿ ಮೂಡುತ್ತದೆ. ಮುಂದಕ್ಕೆ ಅವಳು ಬರೆದ ಕಾದಂಬರಿಯನ್ನು ಅಚ್ಚು ಮಾಡಲು ಯಾರು ಮುಂದಾಗಲಿಲ್ಲ. ಕಡೆಗೆ ತಾನೇ ತನ್ನ ದುಡ್ಡು ಹಾಕಿ ಹಾಕಿಕೊಂಡು ಅಚ್ಚು ಮಾಡಿಸಿ ವಿತರಣೆಗೆ ಬಿಟ್ಟಾಗ ಒಂದು ಪತ್ರಿಕೆಯಲ್ಲಿ 'ರಾಷ್ಟ್ರಘಾತಕ ಕಾದಂಬರಿ' ಎಂಬ ವಿಮರ್ಶೆ ಬರುತ್ತದೆ. ಮತ್ತೆ ಅದು 'ಒಂದು ಕೋಮಿನವರ ಗದ್ದಲಕ್ಕೆ ಕಾರಣವಾಗಿ ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಂಡು ಇವಳನ್ನು ಬಂಧಿಸಬೇಕೆಂಬ ಆದೇಶವೂ ಹೊರಡುತ್ತದೆ. ಅದುವರೆಗೆ ನನಗೆ ಇಸ್ಲಾಂ ಬಗ್ಗೆ ದ್ವೇಷ ಉಂಟಾಗುತ್ತದೆ ಎಂದು ಮತ್ತೆ ಮತ್ತೆ ಅವಳನ್ನು ಚುಚ್ಚಿ ಮಾತನಾಡುತ್ತಿದ್ದ ಗಂಡ ಅಮೀರ–ಇವಳು ದೂರವಾದಾಗ ಎಳೆ ಪ್ರಾಯದ 'ಉರ್ದು ಟೀಚರ್' ಹುಡುಗಿಯನ್ನು ಕಟ್ಟಿಕೊಳ್ಳುವ ಅಮೀರ್–ಲಕ್ಷ್ಮಿಯ ದೃಷ್ಟಿಯಲ್ಲಿ ಕಟ್ಟಾ ಮುಸ್ಲಿಂನಾಗುತ್ತಿದ್ದ ಅಮೀರ್– ಆ ಕಾದಂಬರಿಯನ್ನು ಹುಡುಕಿ ತರಿಸಿಕೊಂಡು ಓದುತ್ತಾನೆ. ಓದುತ್ತಾ ಓದುತ್ತಾ ಮನಸ್ಸಿನಲ್ಲಿ ಗೊಂದಲ ಉಂಟಾಗಿರಲು ಸಾಧ್ಯವೇ? ಆದರೆ ಭೈರಪ್ಪನವರು ಪ್ರತಿಯೊಂದಕ್ಕೂ ಟಿಪ್ಪಣಿ, ಗ್ರಂಥಾಧಾರ, ಸುಲ್ತಾನ ಬಾದಶಹರುಗಳೇ ಬರೆಸಿದ ದಾಖಲೆಗಳನ್ನು ಪ್ರಕಾಶಕರು , ಪುಟ ಸಮೇತ ಕೊಟ್ಟಿದ್ದಾರೆ. ಇಲ್ಲಿಗೆ ಲಕ್ಷ್ಮಿಯ ಬ್ರಾಹ್ಮಣ್ಯಕ್ಕೆ 'ಕಟ್ಟಾಮುಸ್ಲಿಂ' ಅಮೀರ್ ಮತಾಂತರಗೊಳ್ಳುವ ಮೂಲಕ ಅವಳ ಮತ್ತು ಭೈರಪ್ಪನವರ ಗೆಲವು ಪರಿಪೂರ್ಣವಾಯಿತು. ಈ ಮೂಲಕ ಭೈರಪ್ಪ ಕಟ್ಟಿಕೊಡುತ್ತಿರುವ ಸಮಾಜದ ಗುಣ ಲಕ್ಷಣಗಳಾದರೂ ಏನು? ಲಕ್ಷ್ಮಿಯ ದೃಷ್ಟಿಗೆ ಬಾಯಿಬಿಡುವ ಅವಕಾಶವೂ ಸಿಗುತ್ತಿಲ್ಲ, ಸಿಕ್ಕ ಬಳವಳಿಯಾದರೂ ಮುಟ್ಟುಗೋಲು, ಬಂಧನದ್ದು ಎಂದು ಲಕ್ಷ್ಮಿ ಸಮಾಧಾನಪಟ್ಟುಕೊಳ್ಳಬೇಕು. ದುರಂತರವೆಂದರೆ ಭೈರಪ್ಪನವರ ಕಣ್ಣಿಗೆ ಮನುಷ್ಯರೇ ಕಾಣಿಸುವುದಿಲ್ಲ. ಇವರ ಕಣ್ಣಲ್ಲಿ ಎಲ್ಲರೂ ಜಾತಿ ಧರ್ಮದ ಕಾಲಾಳುಗಳು ಮಾತ್ರ ಕಾಣಿಸುತ್ತಾರೆ.

**ಕೊನೆ ಟಿಪ್ಪಣಿಗಳು**

೧. ಎಸ್. ಎಲ್. ಭೈರಪ್ಪ, 'ಆವರಣ' ೨೦೦೭. ಸಾಹಿತ್ಯ ಭಂಡಾರ ಬೆಂಗಳೂರು, ಪುಟ: ೧೯
೨. ಅದೇ, ಪುಟ: ೭೨.
೩. ಅದೇ, ಪುಟ: ೧೮೧.
೪. ಅದೇ, ಪುಟ: ೧೮೭.
೫. ಅದೇ, ಪುಟ: ೧೯೫.

## ಅಧ್ಯಾಯ ೮
## 'ಆವರಣ'ದಲ್ಲಿ ಸಾಮಾಜಿಕ ಚಿಂತನೆಗಳು

ಕಾದಂಬರಿಯು ಮುಖ್ಯವಾಗಿ ಬದುಕಿನಲ್ಲಿ ನಿತ್ಯ ನಮ್ಮ ಅನುಭವದ ಕಕ್ಷೆಯಲ್ಲಿ ಬಂದು ಹೋಗುವ ಜನರನ್ನು, ಸನ್ನಿವೇಶಗಳನ್ನು ಚಿತ್ರಿಸುತ್ತದೆ. ಹಾಗೆ ಚಿತ್ರಿಸುವಾಗ ಆ ಜನರ ಹಾಗೂ ಸನ್ನಿವೇಶಗಳ ಭಾವನಾತ್ಮಕ ಹಾಗೂ ನೈತಿಕ ಬಿಕ್ಕಟ್ಟುಗಳ ಮೇಲೆ ಒತ್ತುಕೊಡುತ್ತದೆ ಯಾಕೆಂದರೆ ಎಲ್ಲ ಸಾಹಿತ್ಯದ ಹಿರಿಮೆಯೂ ಇಂಥ ಮಹತ್ವದ ಹಾಗೂ ಜಟಿಲವಾದ ಬಿಕ್ಕಟ್ಟುಗಳಿಗೆ ಗೌರವಯುತವಾದ ಪರಿಹಾರ ದೊರಕಿಸುವ ಇಲ್ಲವೆ ದೊರಕಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುವ ಸಾಹಸದಲ್ಲಿದೆ.

ಭೈರಪ್ಪನವರೇ ಯಾವುದೇ ಕಾದಂಬರಿಯನ್ನು ಐತಿಹಾಸಿಕ ಅಥವಾ ಸಾಮಾಜಿಕ ಎಂದು ವರ್ಗೀಕರಿಸುವುದು ಸರಿಯಲ್ಲ. ಐತಿಹಾಸಿಕ ಅಥವಾ ಸಮಕಾಲೀನ ಎಂದು ವಿಂಗಡಿಸುವುದು ಹೆಚ್ಚು ಸಮರ್ಪಕವಾಗಬಹುದು. ಸಮಕಾಲೀನ ಸಾಹಿತ್ಯ ಕೃತಿಯು ಕಾಲ್ಪನಿಕವಾದರೆ ಐತಿಹಾಸಿಕ ಸಾಹಿತ್ಯ ಕೃತಿಯೂ ಅಷ್ಟೇ ಮಟ್ಟಿಗೆ ಕಾಲ್ಪನಿಕವಾದುದು ಎಂದು ಹೇಳುತ್ತಾರೆ ಇತಿಹಾಸ ಮತ್ತು ಸಮಕಾಲೀನ ಬದುಕನ್ನು ಪರಸ್ಪರ ಅಭಿಮುಖವಾಗಿಸುವುದೇ ಕಷ್ಟ ಅಂತಹ ಕಷ್ಟದ ಕೆಲಸಕ್ಕೆ ಭೈರಪ್ಪನವರು ಕೈಹಾಕಿದ್ದಾರೆ. ಇಂದು ಎನ್ನುವ ವರ್ತಮಾನವು ನೆನ್ನೆ ಎಂಬ ಭೂತ ಮತ್ತು ನಾಳೆ ಎಂಬ ಭವಿಷ್ಯಕ್ಕೆ ಸಂಪರ್ಕ ಕಲ್ಪಿಸಬಹುದಷ್ಟೇ ಹೊರತು ಅವುಗಳನ್ನು ಪರಸ್ಪರ ಎದುರುಬದುರು ನಿಲ್ಲಿಸಲಾಗುವುದಿಲ್ಲ. ವರ್ತಮಾನದೊಂದಿಗೆ ಇತಿಹಾಸವನ್ನು ಸಮೀಕರಿಸುವ ಅಥವಾ ವರ್ತಮಾನದ ಕಣ್ಣುಗಳಲ್ಲಿ ಇತಿಹಾಸವನ್ನು ಗ್ರಹಿಸುವ ಕೆಲಸಕ್ಕೆ ಧ್ಯಾನಸ್ಥ ಸ್ಥಿತಿ ಅವಶ್ಯಕ. ಆದರೆ, ಸಮೀಕರಣ ಅಥವಾ ಗ್ರಹಿಕೆ ಸರಿಯಾಗಿದೆಯೋ ಅಥವಾ ಇಲ್ಲವೇ ಎಂಬ ಪ್ರಶ್ನೆಗೆ ಉತ್ತರವು ಧ್ಯಾನಸ್ಥ ಸ್ಥಿತಿಯನ್ನು ಅವಲಂಬಿಸುವುದಿಲ್ಲ.

ಧ್ಯಾನಸ್ಥ ಸ್ಥಿತಿಯಲ್ಲಿ ದೊರೆತ ತಿಳುವಳಿಕೆ ಅವರವರ ಜ್ಞಾನದ ಮಟ್ಟವನ್ನು ಅವಲಂಬಿಸಿರುತ್ತದೆ. ಸಾಧನೆಯ ಮಟ್ಟವೆ ಅವರ ಅಳತೆಗೋಲಾಗಬಹುದು. ಇತಿಹಾಸವನ್ನಷ್ಟೆ ಗೌರವಿಸುವವರಿಗೆ ಕಾದಂಬರಿ ಪ್ರೀಯವಾಗಬಹುದು. ಹಾಗೆಯೇ ಕಾದಂಬರಿ ಪ್ರಿಯರಿಗೆ ಇತಿಹಾಸ ರುಚಿಸದಿರಬಹುದು. ಇತಿಹಾಸವು ಮೊದಲಿನಿಂದ ಕೊನೆಯುವರೆಗೂ ದಾಖಲೆಗಳನ್ನು ಆಕರಗಳನ್ನು ಆಧರಿಸುತ್ತದೆ. ದಾಖಲೆಗಳಿಲ್ಲದೆ ಇತಿಹಾಸವಿಲ್ಲ ಕಾದಂಬರಿಗೆ ದಾಖಲೇಗಳೇ ಬೇಕಿಲ್ಲ. ದಾಖಲೆಗಳಿಲ್ಲದಿದ್ದರೆ ಅದಕ್ಕೆ ಹೆಚ್ಚು ರಕ್ಷಣೆ. ಕಾದಂಬರಿಯು ತನ್ನ ಶೈಲಿಯಿಂದ ಓದುಗರಿಗೆ ಪ್ರಿಯವಾಗುತ್ತದೆ. ಈ ಶೈಲಿಯೂ ಕಾಲದಿಂದ ಕಾಲಕ್ಕೆ ಬದಲಾಗುತ್ತದೆ. ವಸ್ತು ಶೈಲಿ ಮತ್ತು ತಂತ್ರಗಳು ಕಾದಂಬರಿಯ ಯಶಸ್ಸಿನಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಕಾದಂಬರಿಯಲ್ಲಿ ಕಾದಂಬರಿಕಾರನ ವ್ಯಕ್ತಿನಿಷ್ಠ ಅಭಿಪ್ರಾಯಗಳಿಗೆ ಪ್ರಾಶಸ್ತ್ಯ ಲಭಿಸಬಹುದು ಅಥವಾ ಅಲ್ಲಿನ ಒಂದು ಪಾತ್ರದ ಅಭಿಪ್ರಾಯಗಳು ಮಹತ್ವ

ಪಡೆಯಬಹುದು. ಆಗಲೂ ಅದು ಕಾದಂಬರಿಕಾರನ ಅಭಿಪ್ರಾಯಕ್ಕಿಂತ ಭಿನ್ನವಾಗಿರುತ್ತದೆ ಎಂದು ಭಾವಿಸುವಂತಿಲ್ಲ. ಕಾದಂಬರಿಯು ಕಾದಂಬರಿಕಾರನ ಅಭಿವ್ಯಕ್ತಿಗೆ ಲಭ್ಯವಿರುವ ಸಮರ್ಥ ಮಾಧ್ಯಮ. ಸಾಮಾನ್ಯವಾಗಿ ಕಾದಂಬರಿಯು ಸಮಕಾಲೀನ ವಸ್ತು ಮತ್ತು ಘಟನೆಗಳನ್ನೇ ಆಧರಿಸಿರುತ್ತದೆ. ನೆನ್ನೆಯ ವಿಷಯ ಬಂದರೆ ಅದು ಐತಿಹಾಸಿಕ ಎನಿಸಿಕೊಳ್ಳುತ್ತದೆ. ಭವಿಷ್ಯದ ಬಗ್ಗೆಯಂತೂ ಯಾರೂ ಇದ ಮಿತ್ಥಂ ಎಂದು ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲವಾದ್ದರಿಂದ ಅದು ಬರಹದ ರೂಪ ತಾಳುವುದೇ ಇಲ್ಲ.

ಇತಿಹಾಸದಲ್ಲಿ ಕಲ್ಪನೆಗೆ ಅವಕಾಶವೇ ಇಲ್ಲವಾದ್ದರಂದ ಆ ಬಗ್ಗೆ ಬರೆಯುವಾಗ ಎಚ್ಚರ ಇರಲೇಬೇಕು. ಇತಿಹಾಸದ ಸಮರ್ಥ ತಿಳುವಳಿಕೆ ಇಲ್ಲದೆ ಬರೆದ ಐತಿಹಾಸಿಕ ಕಾದಂಬರಿಗಳು ಇತಿಹಾಸದ ದಿಕ್ಕನ್ನೇ ತಪ್ಪಿಸಿರುವ ಅನೇಕ ನಿದರ್ಶನಗಳಿವೆ. ಅಂತಹ ಐತಿಹಾಸಿಕ ಎನಿಸಿಕೊಂಡ ಕಾದಂಬರಿಗಳು ಸೃಷ್ಟಿಸಿರುವ ಗೊಂದಲ ಅಪಾಯಕಾರಿಯೂ ಆಗಿರುವ ಉದಾಹರಣೆಗಳಿವೆ.

ಇತಿಹಾಸವು ಒಂದು ಜನಾಂಗದ ಜೀನವದ ಎಲ್ಲ ಮುಖಗಳನ್ನೂ ಅಂತಃಸತ್ವವನ್ನೂ ನಿರೂಪಿಸಬೇಕು. ಇತಿಹಾಸದ ಕೇಂದ್ರವು ಒಂದು ಸಂಸ್ಕೃತಿ ಅಥವಾ ಜೀನವ ಪ್ರವಾಹ ಮತ್ತು 'ಇತಿಹಾಸವು ರಾಜ ರಾಣಿ ಮತ್ತು ಇತರ ಪ್ರಸಿದ್ಧ ಪುರುಷರದು ಮಾತ್ರವಲ್ಲ; ಆಗಲೂ ಜನಸಾಮಾನ್ಯವಿತ್ತು; ಅದರ ಜನಜೀವನವಿತ್ತು ಹಾಗೂ ಒಂದು ದೇಶದ ಅಥವಾ ನಮ್ಮದೇ ದೇಶದ ಪೂರ್ವಜರ ಜೀವನ ಪರಂಪರೆಯನ್ನು ಸತ್ಯ ಪ್ರಜ್ಞೆಯಿಂದ ಅರಿಯುವುದೊಂದೇ ಇತಿಹಾಸದ ಮುಖ್ಯ ಗುರಿ, ಎಂಬುದೂ ಭೈರಪ್ಪನವರ ಅಭಿಪ್ರಾಯವಾದ್ದರಿಂದ ಆ ಹಿನ್ನೆಲೆಯಲ್ಲಿ 'ಆವರಣ' ಕಾದಂಬರಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗಿದೆ.

'ಆವರಣ' ಕಾದಂಬರಿಯಲ್ಲಿ ವರ್ತಮಾನದ ಜೊತೆಗೆ ಭೂತ ತೆಕ್ಕೆ ಹಾಕಿಕೊಂಡಿದೆ. ೨೦ನೇ ಶತಮಾನದ ಕಥೆಯಲ್ಲಿ ಸ್ವಂತ ಖುಷಿಯಿಂದ ಧರ್ಮಾಂತರಗೊಂಡು ರಜಿಯಾ ಆಗಿ ಹೆಸರು ಮಾತ್ರವಲ್ಲದೆ, ಆಚಾರ ವಿಚಾರಗಳನ್ನೂ ಬದಲಾಯಿಸಿಕೊಳ್ಳಲು ಪ್ರಯತ್ನಿಸಿದ ಲಕ್ಷ್ಮಿ ಮತ್ತು ೧೭ನೇ ಶತಮಾನದ ಕಥೆಯಲ್ಲಿ ಇಷ್ಟ ಇಲ್ಲದಿದ್ದರೂ, ಅನ್ಯಮಾರ್ಗವಿಲ್ಲದೆ. ಧರ್ಮಾಂತರಗೊಂಡು ಆಚಾರ ವಿಚಾರಗಳನ್ನು ಬದಲಾಯಿಸಿಕೊಂಡ ಖಾಜಾ ಜಹಾನ್ ಎಲ್ಲ ಘಟನೆಗಳಿಗೆ ಸಾಕ್ಷಿಗಳಾಗಿದ್ದಾರೆ ಲಕ್ಷ್ಮಿ ಧರ್ಮಾಂತರಗೊಂಡು ಗಂಡುತನ ಬೆಳೆಸಿಕೊಂಡರೆ, ಖ್ವಾಜಾ ಜಹಾನ್ ಧರ್ಮಾಂತರದ ನಂತರ ತನ್ನ ಗಂಡುತನವನ್ನು ಕಳೆದುಕೊಂಡು ಇಬ್ಬದಿಯಾಗಿ ಬದುಕುತ್ತಾನೆ. ಧರ್ಮವು ಹೆಣ್ಣನ್ನು ಗಂಡಾಗಿ ಮತ್ತು ಗಂಡನ್ನೇ ಹೆಣ್ಣಾಗಿ ಪರಿವರ್ತಿಸುವಷ್ಟು ಪ್ರಭಾವಶಾಲಿಯಾಗಿರುತ್ತದೆ ಎಂಬುದು ವಿಸ್ಮಯದ ಮಾತು.

ಹಂಪಿಯನ್ನು ಕುರಿತು, ನೋಡುವವರ ಮನಸ್ಸಿನಲ್ಲಿ ಹುಟ್ಟುವ ಮುಸ್ಲಿಂ ವಿರೋಧಿ ಭಾವನೆಗಳನ್ನು ತೊಡೆದುಹಾಕುವ ರೀತಿಯಲ್ಲಿ ಭಗ್ನಾವಶೇಷಗಳ ಸಾಕ್ಷಾಚಿತ್ರ ತಯಾರಿಸಬೇಕೆಂಬ ಸರ್ಕಾರದ ತೀರ್ಮಾನದ ಹಿನ್ನೆಲೆಯಲ್ಲಿ ಚಿತ್ರಕಥೆ ಸಿದ್ಧಪಡಿಸಬೇಕಾಗಿದ್ದ ರಜಿಯಾ, ಸಾಕ್ಷಾಚಿತ್ರದ ನಿರ್ದೇಶಕ ಹಾಗೂ ತನ್ನ ಗಂಡ ಅಮೀರನೊಡನೆ ಹಂಪಿಗೆ ಬಂದು, ಅಲ್ಲಿನ ಭಗ್ನಾವಶೇಷಗಳನ್ನು ನೋಡಿ, ಸರ್ಕಾರದ ನಿರೀಕ್ಷೆಗೆ ತಕ್ಕಂತೆ ಚಿತ್ರಕಥೆ ಸಿದ್ಧಪಡಿಸಲು ಸಾಧ್ಯವಿಲ್ಲ ಎಂಬ ತೀರ್ಮಾನ ಮಾಡಿದಾಗ ತನ್ನ ಊರು, ಅಲ್ಲಿನ ದೇವಾಲಯ, ತಾಯಿಯಾಗಿಯೂ ಸಾಕಿದ ತಂದೆಯ ನೆನಪಿನೊಂದಿಗೆ, ಪುಣೆಯ ಫಿಲ್ಮ್ ಇನ್‌ಸ್ಟ್ಯೂಟ್‌ನಲ್ಲಿ ಕಲಿಯುತ್ತಿದ್ದಾಗ ಪರಿಚಿತನಾಗಿ, ಗೆಳೆಯನೂ, ಪ್ರೇಮಿಯೂ

ಆದ ಅಮೀರನನ್ನು ಕಲಾಜೀವನವನ್ನು ಹಂಚಿಕೊಳ್ಳಲೆಂದೇ ತಾನು ಹುಟ್ಟಿದ ಧರ್ಮವನ್ನು ಬಿಟ್ಟು ತಂದೆ ತಾಯಿ ಎರಡೂ ಆಗಿದ್ದ ಅಪ್ಪನನ್ನು ಬಿಟ್ಟು ಪ್ರೀತಿಗೆ ಶಕ್ತಿಯಿದೆ ಎಂಬ ನಂಬಿಕೆಯಿಂದ ಧರ್ಮಾಂತರಗೊಂಡು ಮದುವೆಯಾಗಿ ಕ್ರಮೇಣ ಕುರಾನ್‌ನ ಅಭ್ಯಾಸವನ್ನಲ್ಲದೆ, ಮುಸಲ್ಮಾನ್ ಧರ್ಮದ ಆಚರಣೆಗಳನ್ನೆಲ್ಲ ಅನುಸರಿಸುತ್ತಾ ಗೋಮಾಂಸವನ್ನೂ ತಿಂದು ಸಂಪೂರ್ಣ ಮುಸಲ್ಮಾನ್ ಆದದ್ದನ್ನು ನೆನಪು ಮಾಡಿಕೊಂಡು ಚಿಂತನೆಗಳಿಗೆ ತೊಡಗುತ್ತಾಳೆ. ಇದು ಸಹಜ ಚಿಂತನೆ ಎನಿಸಿಕೊಳ್ಳುತ್ತದೆ ಕಾದಂಬರಿಯ ಬೆಳವಣಿಗೆಗೇ ಮಾಡಿಕೊಂಡ ತಂತ್ರ ಎಂದು ಯಾರಿಗಾದರೂ ಅನಿಸಬಹುದು. ವಿಚಾರಗಳ ಘರ್ಷಣೆಯೊಂದಿಗೆ ಆರಂಭವಾಗುವ ಕಾದಂಬರಿ ಎಲ್ಲ ವೈಚಾರಿಕ ಅಡ್ಡಿ ಆತಂಕಗಳ ನಿವಾರಣೆಯ ನಂತರ ಆರಂಭವಾಗಬಹುದೆಂದು ನಿರೀಕ್ಷಿಸಿದ ಕಾನೂನಿಗೆ ಸಂಬಂಧಿಸಿದ ಆತಂಕದೊಂದಿಗೆ ಮುಗಿಯುತ್ತದೆ. ಈ ಮುಕ್ತಾಯದಲ್ಲೂ ವೈಚಾರಿಕ ಸಂಬಂಧಗಳಿಗಿಂತ ಭಾವನಾತ್ಮಕವಾದ ಕೌಟುಂಬಿಕ ಸಂಬಂಧವೇ ಪ್ರಮುಖವಾಗುತ್ತದೆ.

ಧರ್ಮ ಹೋಗುವತನಕ ಮಾನವೀಯತೆ ಉಳಿಯಲ್ಲ ಎನ್ನುವ ಶಾಸ್ತ್ರಿಯೇ ಸಂದರ್ಭಕ್ಕೆ ತಕ್ಕಂತೆ ಒಂದಲ್ಲ ಒಂದು ಧರ್ಮದ ಪರವಾಗಿ ನಿಲ್ಲುವುದು ವಿಪರ್ಯಾಸ ಎನಿಸಿದರೂ, ಸಂದರ್ಭದ ಸದುಪಯೋಗ ಮಾಡಿಕೊಂಡು ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳುವುದು ಆತನ ಸ್ವಭಾವ ಎಂಬುದನ್ನು ಒಪ್ಪಿಕೊಳ್ಳಬೇಕು. ಇದೇ ಸ್ವಭಾವ ಹಮ್‌ದುಲ್ಲಾಹಗೂ ಇದೆ. ಯಾವುದೇ ಒಂದು ಧರ್ಮದ ಪರವಾಗಿ ಎನ್ನುವುದಕ್ಕಿಂತ, ಮತ್ತೊಂದು ಧರ್ಮದ ವಿರುದ್ಧ ವಿರುದ್ಧವಾಗಿ ಮಾತನಾಡುವುದೂ ಸಹ ಪ್ರಚಾರಕ್ಕೆ ಸುಲಭ ಮಾರ್ಗವಾಗಿದೆ. ಯಾವುದೇ ಧರ್ಮವು ದಾಂಪತ್ಯವನ್ನು ಒಡೆಯಲು ಅತ್ಯಂತ ಸುಲಭವಾದ ಯಾವುದೇ ಮಾರ್ಗವನ್ನು ಸೃಷ್ಟಿಸಿದರೆ, ಅದು ಮಾನವ ಧರ್ಮದ ವಿರುದ್ಧ ನಡೆಯುವ ಅನ್ಯಾಯ ಎಂದು ಯಾರಿಗಾದರೂ ಅನಿಸಬೇಕು. ಗಂಡಸು ತನಗಿರುವ ಸವಲತ್ತುಗಳ ಸದುಪಯೋಗ ಮಾಡಿಕೊಳ್ಳಬೇಕೆಂದು ನಿರೀಕ್ಷಿಸುವುದು ಅಪರಾಧವಲ್ಲ. ಆದರೆ ಅದು ದಬ್ಬಾಳಿಕೆ ಅಥವಾ ಶೋಷಣೆ ಆಗಬಾರದು ಎಂದು ನಿರೀಕ್ಷಿಸುವುದನ್ನು ಯಾವ ಧರ್ಮವೂ ನಿರಾಕರಿಸುವಂತಿಲ್ಲ. ದಬ್ಬಾಳಿಕೆ ಮತ್ತು ಶೋಷಣೆಯನ್ನು ಯಾವುದೇ ರೀತಿಯಲ್ಲಿ ಪೋಷಿಸುವ ಮತ್ತು ಪ್ರೋತ್ಸಾಹಿಸುವ ದರ್ಮವೂ ಉತ್ತಮ ಸಮಾಜವನ್ನು ನಿರ್ಮಿಸಲು ಸಾಧ್ಯವಿಲ್ಲ ಎಂಬ ಪಾಠವನ್ನು ಇತಿಹಾಸ ಕಲಿಸಬೇಕು. ಈ ಅಭಿಪ್ರಾಯ ಯಾವುದೇ ಒಂದು ಧರ್ಮಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಮನುಷ್ಯ ಮನುಷ್ಯರ ನಡುವೆ ಕಂದಕವನ್ನು ನಿರ್ಮಿಸುವ ಎಲ್ಲ ಧರ್ಮಗಳಿಗೂ ಅನ್ವಯಿಸುತ್ತದೆ.

ಆಡಳಿತ ಚುಕ್ಕಾಣಿ ಹಿಡಿದ ಯಾವುದೇ ರಾಜಕೀಯ ಪಕ್ಷ ತಮಗೆ ಮತ್ತು ತಮ್ಮ ಮಿತ್ರ ಪಕ್ಷಗಳಿಗೆ ಪ್ರಿಯವಾದ ಸಿದ್ಧಾಂತಕ್ಕೆ ತಕ್ಕಂತೆ ಇತಿಹಾಸ, ವಿದ್ಯೆ, ಸಂಶೋಧನೆ, ಕಲೆ ಇತ್ಯಾದಿ ವಿಷಯಗಳಲೆಲ್ಲಾ ಬದಲಾವಣೆ ಮಾಡುತ್ತಾ ಹೋದರೆ, ಗೆದ್ದ ಪಕ್ಷ ಅಧಿಕಾರ ಕಳೆದುಕೊಂಡ ಪಕ್ಷದ ಎಲ್ಲಾ ಕಾರ್ಯಕ್ರಮಗಳನ್ನೂ ಬದಲಾಯಿಸಬೇಕಾಗುತ್ತದೆ. ಕೆಲವು ವರ್ಷಗಳ ಹಿಂದೆ ಇತಿಹಾಸದ ಪಕ್ಷಗಳಲ್ಲಿ ಕೇಸರೀಕರಣ ಆಗುತ್ತಿದೆ ಎಂಬ ಹುಯಿಲೂ ಎದ್ದಿರಲಿಲ್ಲವೆ? ಒಂದು ಖಚಿತವಾದ ಇತಿಹಾಸದ ಪಠ್ಯ ಎಂದಿಗೂ ಸಿದ್ಧವಾಗುವುದಿಲ್ಲ. ಸಂಶೋಧನೆಗಳ ಮೂಲಕ ಬದಲಾಗುವ ಇತಿಹಾಸದ ಪಠ್ಯದ ಜೊತೆಗೆ ರಾಜಕೀಯ ಕಾರಣಗಳಿಂದ ಬದಲಾಗಬೇಕಾದ ಇತಿಹಾಸದ ಪಠ್ಯವು ನಿಜವಾದ ಅರ್ಥದಲ್ಲಿ ಇತಿಹಾಸವನ್ನು ಕಟ್ಟಿಕೊಡಲು ಸಾಧ್ಯವೇ ಇಲ್ಲ.

ಜನರನ್ನು ಓಲೈಸಲು ಮಾಡುವ ಯಾವುದೇ ಬದಲಾವಣೆ ಸತ್ಯವಾಗಿರಲು ಸಾಧ್ಯವಿಲ್ಲ ಎಂಬ ವಾಸ್ತವವನ್ನು ಕಾದಂಬರಿ ಸೂಚಿಸುತ್ತದೆ. ರಾಷ್ಟ್ರೀಯ ಭಾವೈಕ್ಯ ಸಭೆಯಲ್ಲಿ

ರಾಜಕಾರಣದ ಪ್ರಭಾವದಿಂದ ಸಿದ್ಧವಾದ ಏಕಪಕ್ಷೀಯ ತೀರ್ಮಾನಗಳು ಜಾರಿಗೊಳ್ಳುತ್ತವೆ ಎಂಬ ಮಾತು ಯಾವುದೇ ಪ್ರಜ್ಞಾವಂತನನ್ನು ಆತಂಕಕ್ಕೆ ಗುರಿಪಡಿಸುತ್ತದೆ. ಆ ತೀರ್ಮಾನಗಳು ಅಲ್ಪಸಂಖ್ಯಾತರ ಅಥವಾ ಬಹು ಸಂಖ್ಯಾತರ ಪರ ಎನ್ನುವುದಕ್ಕಿಂತ, ಒಡೆದು ಆಳುವ ನೀತಿಯ ಪರ ಎಂದು ತಿಳಿಯಬೇಕಾದದ್ದು ಅನಿವಾರ್ಯ. ಈ ನೀತಿಯು ಓಟಿನ ರಾಜಕಕಾರಣ ಎಂದು ದೂರ ನಿಂತು ನೋಡುವವರಿಗೂ ಅರ್ಥವಾಗುತ್ತದೆ. ಅಂತಹ ತೀರ್ಮಾನಗಳ ಜೊತೆ ಕೈಗೂಡಿಸಿದವರಿಗೆ ಅಥವಾ ವಿರೋಧಿಸುವವರಿಗೆ ತಮ್ಮ ಅಭಿಪ್ರಾಯಗಳೇ ಸರಿ ಎನಿಸುತ್ತವೆ. ಆಗ ಒಂದು ಗುಂಪಿನವರು ಮತ್ತೊಂದು ಗುಂಪಿನವರ ವಿರುದ್ಧ ಟೀಕಾಪ್ರಹಾರ ಆರಂಭಿಸುತ್ತಾರೆ. ಇಂತಹ ಟೀಕಾಪ್ರಹಾರಗಳೂ ಯಾವುದೇ ರಾಜಕೀಯ ಪಕ್ಷಗಳ ರಾಡಿ ಎರಚಾಟಕ್ಕಿಂತ ಭಿನ್ನವಾಗಿರುವುದಿಲ್ಲ. ತಾವು ಮಾತ್ರ ಬುದ್ಧಿವಂತರು, ಉಳಿದವರೆಲ್ಲ ದಡ್ಡರು ಎಂಬ ಅಹಂಕಾರಕ್ಕೆ ಬಲಿಯಾದ ಜನ ರಾಜಕಾರಣಿಗಳಿಗಿಂತ ಭಿನ್ನವಾಗಿರುವುದಿಲ್ಲ. ರಾಜಕಾರಣಿಗಳು ಚುನಾವಣೆಯ ಮೂಲಕ ಅಧಿಕಾರ ಮತ್ತು ಅದರಿಂದ ದೊರೆಯಬಹುದಾದ ಎಲ್ಲವೂ ತಮ್ಮ ಹಕ್ಕು ಎಂದು ತಿಳಿದು ಅದಕ್ಕೆ ತಕ್ಕಂತೆ ನಡೆದುಕೊಳ್ಳುತ್ತಾರೆ. ಯಾವ ರಾಜಕಾರಣಿಯು ಅಧಿಕಾರ ಕಳೆದುಕೊಳ್ಳಲು ಸಿದ್ಧನಿರುವುದಿಲ್ಲ. ಅಧಿಕಾರ ಉಳಿಸಿಕೊಳ್ಳಲು ಯವುದೇ ಗಿಮಿಕ್ ಮಾಡಲು ಆತ ಎಲ್ಲ ಸಿದ್ಧತೆ ಮಾಡಿಕೊಂಡಿರುತ್ತಾನೆ. ಅದು ಅವನಿಗೆ ಅನಿವಾರ್ಯ. ಅಂತಹ ಅವಕಾಶವಾದಿಗಳ ಜೊತೆಗೆ ಬುದ್ಧಿವಂತರು ಸೇರಿದರೆ, ಅವಕಾಶವಾದಿಗಳ ಅಹಂಕಾರ ಮತ್ತಷ್ಟು ಹೆಚ್ಚುವ ಎಲ್ಲ ಸಾಧ್ಯತಗಳೂ ಇರುತ್ತವೆ.

'ಆವರಣ'ದಲ್ಲಿ ಎರಡು ಕಾಲಘಟ್ಟದ ಕಾದಂಬರಿಗಳಿವೆ. ಅವುಗಳ ಪೈಕಿ ನರಸಿಂಹೇಗೌಡರು ಟಿಪ್ಪಣಿ ಸಿದ್ಧಪಡಿಸಿಕೊಂಡು ಅವುಗಳ ನೆರವಿನಿಂದ ರಜಿಯಾ/ಲಕ್ಷ್ಮಿ ಬರೆದ ಭಾಗ ಕ್ರಿ.ಶ.೧೭ನೆಯ ಶತಮಾನದ ಔರಂಗಜೇಬನ ಕಾಲದ ಘಟನೆಗಳನ್ನು ಕುರಿತದ್ದು. ಇದು ಐತಿಹಾಸಿಕ ಕಾದಂಬರಿ ಎನಿಸಿಕೊಳ್ಳುವ ಭಾಗ. ಇದಕ್ಕೆ ಔರಂಗಜೇಬನ ಕಾಲದಲ್ಲಿನ ಕೆಲವು ಘಟನೆಗಳು ಆಧಾರವಾಗಿವೆ. ಜೊತೆಗೆ ಆ ಕಾಲದ ಕೆಲವು ಐತಿಹಾಸಿಕ ವ್ಯಕ್ತಿಗಳೂ ಪಾತ್ರಗಳಾಗಿದ್ದಾರೆ. ಅಲ್ಲಿರುವ ಎಲ್ಲ ಪಾತ್ರಗಳೂ ದಾಖಲಿತ ಇತಿಹಾಸದಲ್ಲಿ ಇಲ್ಲವಾದರೂ, ತಾರ್ಕಿಕವಾಗಿ ಇದ್ದರು ಎಂದು ತಿಳಿದರು ತಪ್ಪಿಲ್ಲ. ದೇವಗಡ ಎಂಬ ಸಣ್ಣ ರಾಜ್ಯ ಔರಂಗಜೇಬನ ಕಾಲಕ್ಕೆ ಇತ್ತು. ಅದನ್ನು ಔರಂಗಜೇಬನ ಕಡೆಯವರು ವಶಪಡಿಸಿಕೊಂಡ ಸಂದರ್ಭದಲ್ಲಿ ದೇವಗಡದ ಯುವರಾಜ ಬಂಧಿಯಾಗಿ, ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಲು ಒಪ್ಪಿ ಪ್ರಾಣ ಉಳಿಸಿಕೊಂಡಿದ್ದ. ಪೂರ್ವ ನಿರ್ಧಾರದಂತೆ ತನ್ನ ರಾಣಿಯೂ ಸೇರಿದಂತೆ ರಾಣಿವಾಸದವರು ಜೌಹರ ಮಾಡಿಕೊಂಡಿದ್ದಾರೆ ಎಂದು ಆತ ತಿಳಿದಿದ್ದ. ವಿಷ್ಣು ಮಂದಿರದ ರಕ್ಷಣೆಗೆ ನೇಮಕಗೊಂಡಿದ್ದ ಯುವರಾಜ, ತಂದೆಯ ಸಾವು ಮತ್ತು ರಾಣಿವಾಸದವರ ಜೌಹರ್ ಆದ್ದ ಸುದ್ದಿಯನ್ನು ಕೇಳಿಯೂ, ವೀರಾವೇಶದಿಂದ ಹೋರಾಡಿ ಅನ್ಯಮಾರ್ಗವಿಲ್ಲದೆ ಬಂಧಿಯಾಗಿ, ಇಸ್ಲಾಂ ಧರ್ಮವನ್ನು ಸ್ವಿಕರಿಸಲು ಒಪ್ಪಿಗೆ ನೀಡಿ ಪ್ರಾಣ ಉಳಿಸಿಕೊಂಡಿದ್ದ.

ಹದಿನೇಳು ವರ್ಷದ ಸ್ಫುರದ್ರೂಪಿ ಯುವಕನ ಪ್ರಾಣ ಉಳಿದರೂ, ಯುದ್ಧರಂಗದಲ್ಲಿ ಹೇಡಿಯಂತೆ ವರ್ತಿಸದೆ ಎಂಬ ಭಾವ ಅವನಲ್ಲಿತ್ತು. ಹದಿನೇಳು ವರ್ಷದ ಧರ್ಮಾಂತರಗೊಂಡ ಸ್ಫುರದ್ರೂಪಿ ಯುವಕನನ್ನು ಅಧಿಕಾರಗಳು ಹೆಣ್ಣಿನಂತೆ ಬಳಸಿಕೊಂಡರು. ಅವನ ಹೆಸರು ಬದಲಾಯಿತು. ಮಾರಾಟಗೊಂಡ ಅವನನ್ನು ಒಂದು ದಿನ ಹಿಜಡಾ ಮಾಡಲಾಯಿತು. ಗಂಡುತನವನ್ನು ಕಳೆದುಕೊಂಡು, ಖ್ವಾಜಾ ಜಹಾನ್ ಆದ ಅವನನ್ನು ಸಹಜವಾಗಯೇ ಯಾವ ಸಂಕೋಚವೂ ಇಲ್ಲದೆ ಜನಾನದ ಸಾಮಿಪ್ಯದಲ್ಲೆ ಇಡಲಾಯಿತು. ಬದುಕು ನಡೆಸುವ ಸಂದರ್ಭದಲ್ಲಿ ಇಸ್ಲಾಂ ಧರ್ಮದ ಬಗ್ಗೆ ಚನ್ನಾಗಿ ತಿಳಿದು, ಆ

ಧರ್ಮದ ಆಚಾರವಿಚಾರಗಳನ್ನು ಕಟ್ಟುನಿಟ್ಟಾಗಿ ಅನುಸರಿಸಿ ಖ್ವಾಜಾ ಜಹಾನ್ ಔರಂಗಜೇಬನ ರಾಣಿಯಲ್ಲೊಬ್ಬಳಾದ ಉದಯಪುರಿ ಮಹಲ್ ಅವರ ಜನಾನಾದಲ್ಲಿ ಸೇವೆ ಮಾಡುತ್ತಿದ್ದಾಗ ತನ್ನ ಹಿಂದಿನ ಬದುಕಿನಲ್ಲಿ ರಾಣಿಯಾಗಿದ್ದ ಶ್ಯಾಮಲಾ ಜೌಹರ್ ಮಾಡಿಕೊಳ್ಳದೆ ಬದುಕಿರುವುದನ್ನು ತಿಳಿದು, ಸಂತೋಷಗೊಂಡರೂ, ತಾನು ಹಿಜಡಾ ಆಗಿರುವುದಕ್ಕೆ ಸಂಕೋಚಪಡುತ್ತಾ ಹವ್‌ದುಲ್ಲಾಹ ನೆರವಿನಿಂದ ಏನನ್ನಾದರೂ ಸಾಧಿಸುವ ಮತ್ತು ಪುನಃ ಶ್ಯಾಮಲಾಳ ಜೊತೆಗೆ ಜೀವನ ಸಾಗಿಸುವ ಕನಸು ಕಂಡ ಖ್ವಾಜಾ ಜಹಾನ್, ಔರಂಗಜೇಬನ ಕಾಲದ ಧರ್ಮಾಂತರ, ವಿಗ್ರಹ ಭಂಜನೆ, ದೇವಾಲಯಗಳ ನಾಶ ಇತ್ಯಾದಿಗಳಿಗೆ ಪ್ರತ್ಯಕ್ಷ ಅಥವಾ ಪರೋಕ್ಷ ಸಾಕ್ಷಿಯಾದವನು. ಅವನಿಂದಲೇ ಪ್ರಸ್ತಾಪಗೊಳ್ಳುವ ಶಿವಾಜಿ ಮೊಘಲರ ವಿರುದ್ಧವಾಗಿ ಮತ್ತು ಹಿಂದೂಗಳ ಪರವಾಗಿ ಹೋರಾಡಿದವನು ಖ್ವಾಜಾ ಜಹಾನ್‌ನ ಮೂಲದ ೧೭ನೆಯ ಶತಮಾನದ ಭಾರತವನ್ನು ಭೈರಪ್ಪ ಓದುಗರಿಗೆ ಪರಿಚಯಿಸಿದ್ದಾರೆ.

ಗತಕಾಲದ 'ಆವರಣ'ದಲ್ಲಿ ಆಡಳಿತ ನಡೆಸುತ್ತಿದ್ದ ಔರಂಗಜೇಬ ಧರ್ಮಾಂಧ, ಸಂಪ್ರದಾಯವಾದಿ ಮುಸಲ್ಮಾನ ಎಂದು ಅನೇಕ ಇತಿಹಾಸಕಾರರು ಹೇಳಿದ್ದಾರೆ. ಕೆಲವು ಇತಿಹಾಸಕಾರರು ಅವನು ಧರ್ಮಸಹಿಷ್ಣುವಾಗಿದ್ದ ಎಂದು ಹೇಳುತ್ತಾರೆ. ಅವರವರ ಭಾವಕ್ಕೆ ಅವರವರ ಭಕುತಿಗೆ ತಕ್ಕಂತೆ ಎರಡೂ ಹೇಳಿಕೆಗಳಲ್ಲಿ ಸತ್ಯವಿರಬಹುದು. ಯಾವ ಯಾವ ಸಂದರ್ಭಗಳಲ್ಲಿ ಔರಂಗಜೇಬ ಧರ್ಮಸಹಿಷ್ಣುವಾಗಿದ್ದ ಅಥವಾ ಧರ್ಮಾಂಧನಾಗಿದ್ದ ಎಂಬ ವಿಚಾರಗಳು ಇತಿಹಾಸಕ್ಕೆ ಮುಖ್ಯವಾಗುತ್ತದೆ. ಒಬ್ಬನೇ ಐತಿಹಾಸಿಕ ವ್ಯಕ್ತಿಯನ್ನು ಹೇಗೆ ಬೇಕಾದರೂ ಚಿತ್ರಿಸಲು ಸಾಧ್ಯವಿದೆ ಎಂಬುದಕ್ಕೆ ಔರಂಗಜೇಬನ ಮತ್ತು ಟಿಪ್ಪುವಿನ ವ್ಯಕ್ತಿಗಳು ಪ್ರಮುಖ ಉದಾಹರಣೆ ಆಗಿವೆ.

ವಿಚಾರವಾದಿಗಳು ಔರಂಗಜೇಬನಿಂದ ಯಾವುದೇ ದೇವಾಲಯಗಳ ನಾಶವಾಗಲಿಲ್ಲ ಮತ್ತು ಅವನು ಅನೇಕ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಿ ರಕ್ಷಿಸಿದ ಎಂದು ದಾಖಲಿಸಿದ್ದಾರೆ. ಕೆಲವು ಸಮಕಾಲೀನ ದಾಖಲೆಗಳು ಔರಂಗಜೇಬನ ಆಣತಿಯಂತೆ ಹಲವು ದೇವಾಲಯಗಳು ನಾಶವಾಗಿರುವ ಬಗ್ಗೆಯೂ ತಿಳಿಸಿವೆ. ಎರಡೂ ಸತ್ಯಗಳನ್ನು ಒಪ್ಪಿಕೊಳ್ಳಬೇಕಾದ್ದು ಅನಿವಾರ್ಯ. ಇಲ್ಲಿ ಪ್ರಗತಿಪರ ಅಥವಾ ಪ್ರಗತಿ ವಿರೋಧ ಎಂಬ ಹಣೆಪಟ್ಟಿಯ ಅವಶ್ಯಕತೆ ಇರುವುದಿಲ್ಲ. ಇತಿಹಾಸದ ವಿಚಾರದಲ್ಲಿ ಪ್ರಗತಿಪರ ಅಥವಾ ಪ್ರಗತಿ ವಿರೋಧಿ ಎಂದು ವಿಭಾಗ ಮಾಡುವುದೇ ಸೂಕ್ತವಾಗಲಾರದು. ಇಂತಹ ಆಕರ್ಷಣೆಯ ಪಾರಿಭಾಷಿಕ ಶಬ್ದಗಳನ್ನು ವರ್ತಮಾನಕಷ್ಟೇ ಅನ್ವಯಿಸಿಕೊಳ್ಳುವುದು ಸೂಕ್ತವಾಗಬಹುದು.[3]

ಇತಿಹಾಸವನ್ನು ಇತಿಹಾಸವನ್ನಾಗಿ ಮಾತ್ರ ಅಭ್ಯಾಸ ಮಾಡಿ, ತಿಳಿಸಿದರೆ ವರ್ತಮಾನಕ್ಕೆ ಮತ್ತು ಭವಿಷ್ಯಕ್ಕೂ ಉಪಕಾರವಾಗುತ್ತದೆ. ಅಲ್ಲಿ ಯಾವುದೇ ಹಣೆಪಟ್ಟಿ ಕಟ್ಟಿಕೊಂಡು ಕೆಲಸ ಮಾಡಿದರೆ, ದೊರೆಯುವ ಫಲವು ಹಣೆಪಟ್ಟಿಯಲ್ಲಿ ಘೋಷಿತವಾದ ಗುರಿಗೆ ತಕ್ಕಂತೆ ಇರುತ್ತದೆ. ಸಂಶೋಧನೆ ಮಾಡದೆಯೂ ಸಮಕಾಲೀನ ವಸ್ತುವನ್ನು ಕುರಿತು ಸಾಹಿತ್ಯ ರಚಿಸಬಹುದು. ಆದರೆ ಐತಿಹಾಸಿಕ ವಸ್ತುವನ್ನು ಆಧರಿಸಿ ಬರೆಯುವಾಗ ಪ್ರತಿಯೊಂದು ವಿವರಕ್ಕೂ ಸಂಶೋಧನೆಯ ಅಗತ್ಯವಿದೆ ಎಂಬುದು ಭೈರಪ್ಪನವರ ಅಭಿಪ್ರಾಯ.

ಸಮಕಾಲಿನ ವಸ್ತುವಿಗೆ ತರ್ಕದ ಸಮರ್ಥನೆ ಅನಿವಾರ್ಯ, ಅಂತೆಯೇ ಐತಿಹಾಸಿಕ ವಸ್ತುವಿಗೆ ಐತಿಹಾಸಿಕ ದಾಖಲೆಗಳ ಸಮರ್ಥ ಬಳಕೆ ಅವಶ್ಯಕ. ಕಾದಂಬರಿಕಾರನಿಗೆ ಬೇಕಾದ ಪ್ರತಿಭೆ, ವ್ಯಕ್ತಿತ್ವ ಇತ್ಯಾದಿಗಳಂತೆಯೇ, ಇತಿಹಾಸಕಾರನಿಗೆ ಸತ್ಯ ಮತ್ತು ದಾಖಲೆಗಳ

ಬಳಕೆಯಲ್ಲಿ ಪ್ರಾಮಾಣಿಕತೆ ಅವಶ್ಯಕ.ಪ್ರಾಮಾಣಿಕತೆ ಇಲ್ಲದ ಯಾವುದೇ ಹೇಳಿಕೆಯನ್ನು ಒಪ್ಪಲು ಸಾಧ್ಯವಿಲ್ಲ. ಆ ನಿಟ್ಟಿನಲ್ಲಿ ಭೈರಪ್ಪ ಸತ್ಯಕ್ಕೆ ಸಮೀಪ ಇದ್ದಾರೆ. ಔರಂಗಜೇಬನ ಕಾಲದ ರಾಜಕೀಯ ಮತ್ತು ಸಾಮಾಜಿಕ ಬದುಕನ್ನು ಕಟ್ಟಿಕೊಟ್ಟಿದ್ದಾರೆ.

ಆ ಕಾಲದ ಆಡಳಿತ ಕ್ರಮವನ್ನು ತಮ್ಮ ಅಭ್ಯಾಸದ ಮೂಲಕ ಸ್ಪಷ್ಟಪಡಿಸಿದ್ದಾರೆ. ಸತ್ಯವನ್ನು ತಿಳಿಸುವ ಸಂದರ್ಭದಲ್ಲಿ ಕಲಾಕೃತಿಯ ಸೌಂದರ್ಯಕ್ಕೆ ಧಕ್ಕೆ ಆದರೆ ಅಲ್ಲಿ ಶಿವ ಅವತರಿಸಲು ಸಾಧ್ಯವೇ ಇಲ್ಲ. ವರ್ತಮಾನದ ಸಾಮಾಜಿಕ ಚಿಂತನೆಗಳು ಯಾವ ದಿಕ್ಕಿನಲ್ಲಿ ಸಾಗಿವೆ ಮತ್ತು ಸಾಗುತ್ತವೆ ಎಂಬ ಬಗ್ಗೆಯೂ ಆವರಣ ವಸ್ತುಸ್ಥಿತಿಯನ್ನು ಅನಾವರಣಗೊಳಿಸಿದೆ.

ಭೈರಪ್ಪನವರು ಖ್ವಾಜ ಜಹಾನನ ಮೂಲಕ ತಿಳಿಸುವ ಸಲಿಂಗ ಕಾಮ, ಗಂಡಸಿನ ಪುಂಸಸತ್ವವನ್ನು ನಾಶ ಮಾಡಿ, ಹಿಜಡಾ ಮಾಡುವ ಕ್ರಮ, ಅಧಿಕಾರಿಗಳ ಸುಖಲೋಲಪತೆ ಇತ್ಯಾದಿಗಳು ಮನುಷ್ಯನ ವಿಕೃತಿಯ ಅನಾವರಣ ಮಾಡುತ್ತದೆ. ಇಂತಹ ವಿಕೃತಿಗಳ ನಿರೂಪಣೆಯು ಕಲಾಕೃತಿಯ ಸೌಂದರ್ಯ ಹಾಳುಗೆಡುವುತ್ತದೆ. ಸತ್ಯವನ್ನು ಹೇಳುವಾಗ ಇಂತಹ ಅಪ್ರಿಯವಾದ ಸತ್ಯಗಳೂ ಇರುತ್ತವೆ ಎಂದು ವಾದವನ್ನು ಸಮರ್ಥಿಸಿಕೊಳ್ಳಬಹುದು. ಆದರೆ ಭಾರತೀಯರು ನಬ್ರೂಯಾತ್ ಸತ್ಯಂ ಪ್ರಿಯಂ ಎಂಬ ನೀತಿಗೂ ಬೆಲೆ ಕೊಟ್ಟವರು. ಸಮಾಜಕ್ಕೆ ಹಾನಿ ಮಾಡಬಹುದಾದ ಇತಿಹಾಸದ ಯಾವುದೇ ವಿಚಾರಗಳನ್ನು ಮತ್ತೆ ಮತ್ತೆ ಕೆಣಕುವುದರಿಂದ ಆಗುವ ಅನುಕೂಲಗಳೇನು ಎಂಬ ಪ್ರಶ್ನೆಗೂ ಬುದ್ಧಿವಂತರಾದ ಯಾರಾದರೂ ಉತ್ತರಿಸಬೇಕಾಗುತ್ತದೆ.[5]

ಇಂದು ನಮಗೆ ಒಪ್ಪಿಗೆಯಾಗದ ಎಷ್ಟೋ ಘಟನೆಗಳು ಹಿಂದೆ ನಡೆದುಹೋಗಿವೆ. ಈಗ ಅವುಗಳನ್ನು ಬದಲಾಯಿಸಲು ಸಾಧ್ಯವಿಲ್ಲ. ಇಲ್ಲಿ ಪ್ರಗತಿಪರ ಅಥವಾ ಪ್ರಗತಿ ವಿರೋಧಿ ಎಂಬ ಯಾವುದೇ ಮಾತುಗಳಿಗೆ ಯಾವುದೇ ಅರ್ಥ ದೊರೆಯುವುದಿಲ್ಲ. ಯಾವುದೇ ರಾಜಕೀಯ ಸಿದ್ಧಾಂತಗಳು ನಡೆದು ಹೋಗಿರುವ ಯಾವುದೇ ಘಟನೆಗಳನ್ನು ಬದಲಾಯಿಸಲು ಸಾಧ್ಯವಿಲ್ಲ. ನಡೆದುಹೋಗಿರುವ ಒಳ್ಳೆಯ ವಿಷಯಗಳನ್ನು ಆಗುಮಾಡಲು ಹಾಗೂ ಆಗಿ ಹೋಗಿರುವ ಯಾವುದೇ ಕಹಿ ವಿಚಾರಗಳು ಮರುಕಳಿಸದಿರುವಂತೆ ಎಚ್ಚರ ವಹಿಸಲು ಇತಿಹಾಸದ ಅಧ್ಯಯನ ನೆರವಾಗಬೇಕು. ಇತಿಹಾಸದ ಮಾರ್ಗದರ್ಶನದಲ್ಲಿ ವರ್ತಮಾನ ಮತ್ತು ಭವಿಷ್ಯಗಳನ್ನು ರೂಪಿಸಿಕೊಳ್ಳಬೇಕು. ಇತಿಹಾಸದ ಅಧ್ಯಯನದಿಂದ ಇಂತಹ ಪ್ರಯೋಜನ ಪಡೆಯಬೇಕಾದದ್ದು ಅವಶ್ಯಕ. ಮುಂದೆ ಯಾವುದೋ ಒಂದು ಕಾಲದಲ್ಲಿ ಪ್ರಗತಿ ವಿರೋಧಿಗಳು ಪ್ರಗತಿಗಾಮಿಗಳು ಎಂಬ ಎರಡು ಬಣ ಇರುತ್ತವೆ ಎಂಬ ಕಾರಣದಿಂದ ಇತಿಹಾಸ ನಡೆದಿಲ್ಲ. ಪ್ರಗತಿಗಾಮಿ ಅಥವಾ ಪ್ರಗತಿ ವಿರೋಧಿ ಎಂಬ ಬಣಗಳು ವರ್ತಮಾನಕ್ಕೆ ಮತ್ತು ಸ್ವಲ್ಪಮಟ್ಟಿಗೆ ಭವಿಷ್ಯಕ್ಕೆ ಸರಿಹೋಗಬಹುದು. ಆಗಿಹೋದ ಇತಿಹಾಸಕ್ಕಂತೂ ಅಂತಹ ವಿಂಗಡನೆಯ ಅವಶ್ಯಕತೆ ಇಲ್ಲ.

ರಾಜಕೀಯ ಸಿದ್ಧಾಂತ ಪ್ರೇರಿತ ಗುಂಪುಗಳು ಯಾವುದೇ ರೀತಿಯಲ್ಲಿ ಶೈಕ್ಷಣಿಕವಾಗಿ ರಚನಾತ್ಮಕ ಕಾರ್ಯಗಳನ್ನು ಮಾಡಲಾಗುವುದಿಲ್ಲ. ಒಂದು ಬಣ ಇಲ್ಲವೂ ಎಡಪಂಥೀಯರ ಪರವಾಯಿತು ಎಂದು ಅಲವತ್ತುಕೊಂಡರೆ, ಇನ್ನೊಂದು ಪಂಗಡ ಎಲ್ಲವೂ ಕೇಸರೀಕರಣವಾಯಿತು ಎಂದು ನೊಂದುಕೊಳ್ಳುತ್ತದೆ. ಯಾರಿಗೂ ಸತ್ಯಬೇಕಾಗಿಲ್ಲ. ಇಂದಿನ ರಾಜಕೀಯ ಪಕ್ಷಗಳಲ್ಲಿರುವ ಪ್ರಮುಖ ಗುಣವೆಂದರೆ ಯಾವುದೇ ಆಳುವ ಪಕ್ಷ ತಾನೇ ಸಮಸ್ತವೂ ಎಂಬ ಧೋರಣೆ ತಳೆದರೆ ವಿರೋಧ ಪಕ್ಷವು ಆಳುವ ಪಕ್ಷದ ಎಲ್ಲ ವಿಚಾರಗಳನ್ನೂ ವಿರೋಧಿಸುವುದೇ ತನ್ನ ಕರ್ತವ್ಯ ಎಂದು ಭಾವಿಸುತ್ತದೆ.

ಒಂದು ಸಮಾಜವೆಂದರೆ ಅದರ ಧರ್ಮವೊಂದೇ ಮುಖ್ಯವಲ್ಲ. ಧಾರ್ಮಿಕ ಇತಿಹಾಸವಷ್ಟೇ ಎಂಬ ಕಲ್ಪನೆ ಬೇರೂರುತ್ತಿದೆ. ನಮ್ಮ ಪ್ರಾಚೀನರಿಗೆ ಧರ್ಮದ ವಿನಾ ಮತ್ತೇನೂ ಬೇಕಿರಲಿಲ್ಲವೆ? ಧರ್ಮ ಮೂಲಕವಾದರೂ ಅವರು ತಿಳಿಯಪಡಿಸಿದ್ದು ಬದುಕಿಗೆ ಸಂಬಂಧಪಟ್ಟ ವಿಚಾರಗಳನ್ನು ತಮ್ಮ ಸಂಸ್ಕೃತಿಯನ್ನು ಜೀವನ ವಿಧಾನವನ್ನು, ತಮ್ಮ ವೈಚಾರಿಕ ತುಡಿತಗಳನ್ನು, ವೇದೋಪನಿಷತ್ತುಗಳಲ್ಲಿ ಪ್ರತಿಬಿಂಬಿತವಾಗಿರುವ ಆ ಕಾಲದ ಬದುಕನ್ನು ಸಾಮಾಜಿಕ ಜೀವನವನ್ನು ಪ್ರೀತಿ ಮತ್ತು ವಿಶ್ವಾಸಗಳನ್ನು ಮರೆತು ಅದರಲ್ಲಿದೆ. ಎಂದು ಭಾವಿಸಿದ ಪಾರಮಾರ್ಥಿಕ ತತ್ವಗಳಿಗೆ ಶರಣುಹೋಗುತ್ತೇವೆ. 'ಆವರಣ'ದಲ್ಲಿ ವರ್ತಮಾನವು ಭೂತವನ್ನು ನೆನಪು ಮಾಡಿಕೊಂಡಿದೆ. ಅದು 'ಭೂತ'ವೇ ಆಗಿ ಕಾಡುವ ಅಪಾಯವಿದ್ದರೂ ಸಹ, ಭೂತದ ನೆನಪುಗಳು ವರ್ತಮಾನವನ್ನು ರೂಪಿಸಬೇಕಾಗಿರುವ ಅನಿವಾರ್ಯತೆ ಇರುವುದರಿಂದ ೧೭ನೆಯ ಶತಮಾನದ ನೆನಪುಗಳು ೨೦ನೆಯ ಶತಮಾನವನ್ನು ರೂಪಿಸಿರುವ ಕ್ರಮವನ್ನು ಭೈರಪ್ಪನವರು ಅನಾವರಣ ಮಾಡಿದ್ದಾರೆ. ಆವರಣದ ಪ್ರಬಲ ಅಂಶವೂ ಇದೆ ಮತ್ತು ದುರ್ಬಲ ಅಂಶವೂ ಇದೆ.

೧೭ನೆಯ ಶತಮಾನದ ಇತಿಹಾಸ ಮಾತ್ರ ಕಾದಂಬರಿ ರೂಪ ಪಡೆದಿದ್ದರೆ, ಆಗ ಒಂದು ಕಲಾಕೃತಿಯಾಗುವ ಅವಕಾಶ ಇತ್ತು. ೧೭ನೆಯ ಶತಮಾನದ ಇತಿಹಾಸವನ್ನು ೨೦ನೆಯ ಶತಮಾನದ ಇನ್ನೂ ವರ್ತಮಾನವಾಗಿಯೇ ಉಳಿದಿರುವ ಸಂಗತಿಗಳೊಡನೆ ಸಮೀಕರಿಸುವ ಸಂದರ್ಭದಲ್ಲಿ ಅವರವರ ಮನಸ್ಸಿಗೆ ಹಿತವಾದ ಸಿದ್ಧಾಂತಗಳು ಮಾತ್ರ ವಿಜೃಂಭಿಸಿ, ಕಾದಂಬರಿಯು ಕಲಾಕೃತಿಯಾಗುವ ಎಲ್ಲ ಅವಕಾಶಗಳಿಂದದ ವಂಚಿತವಾಗಿ ಇದು ಅಪ್ರಿಯವಾದ ಕೆಸರೆರಚಾಟದಂತೆ ಕಾಣುತ್ತದೆ ಈ ಕೆಸರೆರಚಾಟ ನಿಲ್ಲುವವರೆಗೆ ಸರ್ವಗ್ರಾಹ್ಯವಾದ ಮತ್ತು ಸತ್ಯಕ್ಕೆ ಸಮೀಪ ಎನ್ನಬಹುದಾದ ಇತಿಹಾಸವೂ ದೂರವೇ ಉಳಿಯುತ್ತದೆ ಎಂಬ ವ್ಯಥೆ ಯಾವುದೇ ಸಿದ್ಧಾಂತಕ್ಕೆ ಮರುಳಾಗದವರದು ಎಂಬುದನ್ನು ಅನಿವಾರ್ಯವಾಗಿ ಹೇಳಬೇಕಾಗಿದೆ.

'ಆವರಣ'ವು ಇತಿಹಾಸಕ್ಕೂ ಒಂದು ಆವರಣವನ್ನು ಸೃಷ್ಟಿಸಿದೆ ಎಂದು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗಿದೆ ವಿಚಾರ ಮತ್ತು ಭಾವನೆಗಳ ತಾಕಲಾಟದಲ್ಲಿ ಯಾವುದೂ ಮಹತ್ವ ಪಡೆಯದಿರುವುದು ಒಂದು ವಿಪರ್ಯಾಸ.

**ಕೊನೆ ಟಿಪ್ಪಣಿಗಳು**

೧. ಎಸ್. ಎಲ್. ಭೈರಪ್ಪ, 'ಆವರಣ' ೨೦೦೭. ಸಾಹಿತ್ಯ ಭಂಡಾರ ಬೆಂಗಳೂರು, ಪುಟ: ೭೭
೨. ಅದೇ, ಪುಟ: ೯೪.
೩. ಅದೇ, ಪುಟ: ೧೦೯.

## ಅಧ್ಯಾಯ ೯
## 'ಆವರಣ' ಕಾದಂಬರಿಯ ಒಳ-ಹೊರ ನೋಟ

'ಆವರಣವು' ಕಲ್ಪಿಸಿಕೊಂಡಿದೆಯೆನ್ನಲಾದ ಅಥವಾ ಕಲ್ಪಿಸಿಕೊಟ್ಟಿದೆಯೆನ್ನಲಾದ ಚಾರಿತ್ರಿಕ ಹೊರಒಳನೋಟಗಳನ್ನು ಅವುಗಳ ಪಾಡಿಗೆಬಿಟ್ಟು ಅದನ್ನೊಂದು ಸಂದೇಶರಹಿತ ಕೃತಿಯಾಗಿ ಓದುಗ ನೋಡಬಲ್ಲವನಾದರೆ, ಇಷ್ಟಪಡಬಲ್ಲವನಾದರೆ, ಅದು ಸಾರ್ಥಕವಾಯಿತೆಂದು ಅನಿಸುತ್ತದೆ. ಕಾದಂಬರಿಯೊಂದು ಸತ್ಯವನ್ನು ಚಿತ್ರಿಸಿತೆ ಇಲ್ಲವೇ ಎಂಬುದು ಗೌಣವಾಗುತ್ತದೆ. ದರುಶನಗಳೆಲ್ಲ ಸತ್ಯದ ದರುಶನಗಳೇ ಆಗಬೇಕಾಗಿಲ್ಲ. ಸೃಷ್ಟಿಶೀಲತೆಯ ಗುರಿ ಮತ್ತು ಸಿದ್ಧಿ ಸತ್ಯದ ತಾಜಾತನದಲ್ಲಿರುವುದಿಲ್ಲ. ಸತ್ಯದ ಹೊರತಾಗಿಯೂ ಸೌಂದರ್ಯವನ್ನು ನೀಡುವುದೇ ಕಲೆಯ ಲಕ್ಷಣ. ಪೂರ್ಣತೆಯನ್ನು ತಲುಪದೆಯೋ ಪೂರ್ಣವಾಗುವ ಹಂತ ಅದು. ಭೈರಪ್ಪನವರು ಪ್ರಾರಂಭದಲ್ಲಿಯೇ ಈ ಕಾದಂಬರಿಯ ಐತಿಹಾಸಿಕ ವಿಷಯದ ಕುರಿತು ಒಂದು ಎಚ್ಚರಿಕೆ ನೀಡುತ್ತಾರೆ.[೧]

ಭೈರಪ್ಪನವರ ಬಹುತೇಕ ಕಾದಂಬರಿಗಳಂತೆಯೇ 'ಆವರಣ'ವೂ ಬಿಳಲುಗಳನ್ನು ಬಿಟ್ಟ ಆಲದಂತೆ ಸಮೃದ್ಧ ವಿವರಗಳನ್ನೊದಗಿಸುವ, ಗಹನವಾದ ಓದನ್ನು ಅಪೇಕ್ಷಿಸುವ ನಿರ್ಣಯದ ಹಂತದಿಂದ ಕಿಂಚಿತ್ ದೂರದಿಂದಲೇ ತನ್ನ ಹಿಡಿತವನ್ನು ಸಾಧಿಸುವ ಕೃತಿ. ಇಲ್ಲಿನ ಪಾತ್ರಗಳೆಲ್ಲವೂ ಭಾರೀ ಚಿಂತಕರೇನಲ್ಲ. ಆದರೆ ಅವರ ನಡೆನುಡಿಯ ಹಿಂದೆ ಒಂದು ಸಹಜ ಚಲನೆಯಿದೆ.

'ಅವರಣ'ದಲ್ಲಿ ಸಾರ್ಥದ ಕಾಲದ ಅನಂತರದ ಸತ್ಯವಿದೆಯೆಂದು ಅನ್ನಿಸುವುದಿಲ್ಲ. ವರ್ತಮಾನ ಸಮಾಜದಲ್ಲಿ ಅಂತರ್ಜಾತೀಯ ವಿವಾಹವನ್ನು ಮಾಡಿಕೊಂಡ ಕಲಾವಿದೆಯೊಬ್ಬಳು ಮತಾಂತರದ ಸಹಜ ಸಂದಿಗ್ಧಗಳನ್ನೆದುರಿಸುವುದು ಮತ್ತು ತನ್ನ ಮೇಲಿನ ಈ ಮಾನಸಿಕ ಒತ್ತಡಗಳನ್ನು ನೇರವಾಗಿ ಇದಿರಿಸಲಾಗಿದೆ. ಇತಿಹಾಸದ ಶೋಧನೆಯ ಮೂಲಕ ತನ್ನ ನಿಲುವುಗಳನ್ನು ಗಟ್ಟಿಗಳಿಸಲು ಯತ್ನಿಸುವುದು ಮತ್ತು ತಾನು ಕಡೆಯುವ ಶಿಲ್ಪದ ಸತ್ಯದ ಮುಖವನ್ನು ಎತ್ತ ನಲ್ಲಿಸುವುದೆಂಬುದನ್ನರಿಯದವರಂತೆ ಗೊಂದಲದ ಗೂಡಾಗುವುದು ಇಲ್ಲಿನ ವರ್ತಮಾನದ ಘಟನಾವಳಿಗಳಾದರೆ, ಹದಿನೇಳನೇಯ ಶತಮಾನದ ಭಾರತೀಯ ಚರಿತ್ರೆಗೆ ಸಂಬಂಧಿಸಿದಂತೆ ಶಕ್ತರ ಕ್ರೌರ್ಯ ಮತ್ತು ಅದಕ್ಕೆ ನೀಡುವ ಧಾರ್ಮಿಕ ಸೈದ್ಧಾಂತಿಕ ಲೇಪ ಇವು ಗತಕಾಲದ ಅಥವಾ ಚರಿತ್ರೆಯ ಘಟನಾವಳಿಗಳಾಗುತ್ತವೆ.

ಆವರಣ ಕೃತಿಯಿಂದ ಹೆಚ್ಚಾಗಿ ಭೈರಪ್ಪನವರ ರಾಜಕೀಯ, ಪಂಥೀಯ ನಿಲುವಿನ ಕುರಿತೇ ಚರ್ಚೆಯಾಗುತ್ತಿರುವುದು ಒಂದು ವಿಪರ್ಯಾಸ. ಅದಕ್ಕೆ ಕೃತಿಯಲ್ಲಿನ ಇತಿಹಾಸಕ್ಕೆ ಸಂಬಂಧಿಸಿದ ಘಟನೆಗಳೇ ಕಾರಣ. ಹಿಂದುಗಳ ವಿರುದ್ಧ ಮುಸಲ್ಮಾನರು ಆಕ್ರಮಣಶೀಲರಾಗಿ ವರ್ತಿಸಿ ಶೋಷಿಸಿದ್ದಾರೆಂಬ ಸಿದ್ಧಾಂತಕ್ಕೆ ಪೂರಕವಾಗಿ ಇಲ್ಲಿನ ಘಟನೆಗಳನ್ನು ಉದಾಹರಿಸುವುದನ್ನು ಕಾಣುತ್ತೇವೆ. ಆದರೆ ಈ ಸ್ತರದಲ್ಲೂ ಕಾದಂಬರಿಯೊಳಗಿನ

ಇತಿಹಾಸವನ್ನು ಅವಲೋಕಿಸಿದರೆ ಎಲ್ಲೂ ಹಿಂದುಗಳ ದುರಂತಕ್ಕೆ ಮುಸಲಾನರೇ ಏಕಮೇವ ಮತ್ತು ಪೂರ್ಣಕಾರಣರೆಂಬ ಚಿತ್ರಣವಿಲ್ಲ. ಈ ದೇಶದ ಇತಿಹಾಸವನ್ನು ಗಮನಿಸಿದರೆ ಪ್ರತಿಯೊಬಪ ಪೃಥ್ವಿರಾಜ್‌ನ ಹಿಂದೆ ಒಬ ಒಳ ಸಂಚಿನ ಜಯಚಂದ್ರನರುವುದು ನಿಚ್ಚಳವಾಗುತ್ತದೆ. ಕಾದಂಬರಿಯು ಸತ್ಯವನ್ನೇ ಗಮನಿಸಿದರೂ ಕಥಾನಾಯಕ ರಜಪೂತ ರಾಜಕುಮಾರನಾಗಿ ಬದುಕುತ್ತಾನೆ. ಮತ್ತು ನಧಾನವಾಗಿ ಬದಲಾಗುವ ಪರಿಸ್ಥಿತಿಗೆ ಹೊಂದಿಕೊಳ್ಳುತ್ತಾನೆ. ಮಾತ್ರವಲ್ಲ ಅನಿವಾರ್ಯವಲ್ಲದಿದ್ದರೂ ಅದನ್ನು ಅನಿವಾರ್ಯವೆಂಬಂತೆ ಕಲ್ಪಿಸಿ ಒಪ್ಪಿಕೊಳ್ಳುತ್ತಾನೆ.

'ಆವರಣ' ಹಲವು ಕಾರಣಗಳಿಗಾಗಿಯೇ ಕಂದಬರಿಯ ಒಳಗಣ ಮಾತ್ರವಲ್ಲ ಹೊರಗಣ ಪ್ರಶ್ನೆಗಳನ್ನು ಎದುರಿಸುತ್ತದೆ, ಕೃತಿಯ ಒಟ್ಟು ವಿನ್ಯಾಸವು ಕಾದಂಬರಿಯ ಸಿದ್ಧ ಸೂತ್ರಗಳಿಗೆ ಹೊಂದುವುದಿಲ್ಲ. ಆದರೆ ಇನ್ನೊಂದು ಪ್ರಯೋಗವೆಂದೊ ತಂತ್ರವೆಂದೊ ಸ್ವೀಕರಿಸಬಹುದು. ಕೊನೆಯ ಭಾಗದಲ್ಲಿ ಉಲ್ಲೇಖಿತ ಕೃತಿಗಳು ಕಾದಂಬರಿಯವೂ ಹೌದು. ಕಾದಂಬರಿಯೊಳಗೆ ಲಕ್ಷ್ಮಿ ಬರೆದ ಕಾದಂಬರಿಯವೂ ಹೌದು. ಲಕ್ಷ್ಮಿ ಬರೆದ ಕಾದಂಬರಿ ಐತಿಹಾಸಿಕ ಸತ್ಯಗಳನ್ನು ಸಮರ್ಥಿಸುವ ನರೂಪಣೆ ಆಕೆಯ ಬರಹದ್ದೂ ಅಲ್ಲ, ಬದುಕಿನದ್ದೂ ಅಲ್ಲ. ಹಿಂದುತ್ವದ ಬೀಜವನ್ನು ಒಡೆದು ನರ್ವೀರ್ಯಗೊಳಿಸಿದ ಇತಿಹಾಸವನ್ನು ಅದು ಸತ್ಯವೆಂಬಂತೆ ಬರೆಯುತ್ತಲೆ ತನ್ನ ಮುಸ್ಲಿಮ್ ಮಗನಿಗೆ ಪ್ರೋ ಶಾಸ್ತ್ರಿಗಳ ಮಗಳನ್ನು ಮದುವೆ ಮಾಡಿಸುವುದು ಕಾದಂಬರಿಯ ಮೂರ್ತ ವ್ಯಂಗಗಳಲ್ಲೊಂದು. ಇತಿಹಾಸದ ಸತ್ಯಗಳ ಸಂಕೇತಕ್ಕೆ ಲಕ್ಷ್ಮಿ ಬದುಕಿನ ಪ್ರಾತ್ಯಕ್ಷಿಕೆಯನ್ನೊದಗಿಸುವುದು ಅವಳ ದುರಂತ.

ಭೆರಪ್ಪನವರು ಕರಾರುವಾಕ್ಕಾಗಿ ಅಧ್ಯಯನ ನಡೆಸಿ ಬರೆಯುವವರು. ಕೃತಿಯನ್ನು ನ್ಯಾಯಮೂರ್ತಿಗಳು ವಕೀಲರುಗಳೂ ಓದಿ ಪರಾಮರ್ಶಿಸಿದ್ದಾರೆ. ಆದರೂ ಮುಖ್ಯವಾದ ತಪ್ಪು ಮಾಹಿತಿಯೊಂದು ಲಕ್ಷ್ಮಿ ಮಾತುಗಳ ಮೂಲಕ ಹುಟ್ಟಿಕೊಂಡಿದೆ. ಆಕೆ ಹೇಳುತ್ತಾಳೆ ತಲಾಕ್ ನಿಬಂಧನೆಯಿರುವ ಧರ್ಮದಿಂದ ಕಾನೂನು ಪ್ರಕಾರವೇ ಹೊರಬರುವ ಅಧಿಕಾರ ಈ ದೇಶದ ಪ್ರಜೆಯಾಗಿ ನನಗಿದೆಯಲ್ಲವಲ್ಲ ನಾನು ಈಗಿರುವ ಧರ್ಮವನ್ನು ಬದಲಾಯಿಸಿಕೊಂಡಿದಿನಿ ಮುಕ್ತ ಹಿಂದೂ ಆಗಿದಿನಿ ಅಥವಾ ನನಗೆ ಯಾವ ಧರ್ಮವೂ ಇಲ್ಲ ಅಂತ ಒಂದು ಅಧಿಕೃತ ಘೋಷಣೆ ಸಹಿ ಹಾಕಿದರೆ ನನ್ನ ನಿನ್ನ ಮದುವೆಯ ಸಂಬಂಧ ತನಗೇ ತಾನೆ ಮುರಿದು ಬೀಳುತ್ತೆ. ಇದನ್ನು ಕೇಳಿ ಆಕೆಯ ಮುಸ್ಲಿಂ ಗಂಡನ ಮುಖ ಕಳೆಗುಂದುತ್ತದೆ. ಒಳಗೆಲ್ಲಾ ಶೂನ್ಯ ಕವಿಯುವಂತಾಗುತ್ತದೆ.

ಆದರೆ ವಾಸ್ತವವಾಗಿ ಭಾರತೀಯ ಕಾನೂನನಡಿ ಲಕ್ಷ್ಮಿಗೆ ಈ ಹಕ್ಕಿಲ್ಲ. ಯಾವುದೇ ಜಾತಿಯೊಳಗಿನ ಪದ್ಧತಿಯಂತೆ ಒಂದು ಸಂಬಂಧ ಸೃಷ್ಟಿಯಾದರೆ ಮತಾಂತರ ಹೊಂದಿದಾಕ್ಷಣ ಆ ಕಾನೂನು ಆತನನ್ನು ಅಥವಾ ಆಕೆಯನ್ನು ಕೈಬಿಡುವುದಿಲ್ಲ. ಹಿಂದುವೊಬ್ಬ ಎರಡನೇ ಮದುವೆಯಾಗುವುದಕ್ಕಾಗಿ ಇಸ್ಲಾಂನ್ನು ಆಶ್ರಯಿಸಿದರೂ ಆತನಗೆ ದ್ವಿಪತ್ನಿತ್ವಕ್ಕೆ ಶಿಕ್ಷೆಯಿದೆ.

'ಆವರಣ' ಕಾದಂಬರಿಯಲ್ಲಿ ಎಸು. ೧೨೦೦-೧೭೦೦ರ ಅವಧಿಯಲ್ಲಿ ಭಾರತದ ಸಣ್ಣಪುಟ್ಟ ರಾಜಮಹಾರಾಜರನ್ನೆಲ್ಲ ಮುಸ್ಲಿಂ ಆಕ್ರಮಣಕಾರರು ಸದೆ ಬಡಿದು ನಿರ್ನಾಮ ಮಾಡಿ ತಮ ಕರಾಳ ಆರಕ್ತ ಆಧಿಪತ್ಯವನ್ನು ಭಾರತದಲ್ಲಿ ಸ್ಥಾಪಿಸಿ ವಿಜೃಂಭಿಸಿ ಅಂತ್ಯವಾದರು. ಅದು ವಿಚ್ಛಿನ್ನವಾಗಿ, ಅಲ್ಲೊಂದು ಇಲ್ಲೊಂದು ಪ್ರಾಂತ್ಯವನ್ನು ಬಿಟ್ಟರೆ ಸುಮಾರು ಐದೂಐದೂವರೆ ಶತಮಾನಗಳಷ್ಟು ಕಾಲ ನಡೆಯಿತು. ಅದರ ಒಂದು ಚಿತ್ರಣವನ್ನು ಆವರಣದಲ್ಲಿ ನೀಡಲು ಭೆರಪ್ಪ ಪ್ರಯತ್ನಿಸಿದ್ದಾರೆ.

ಈ ಕೃತಿಯ ಕೊನೆಯಲ್ಲಿ ಕಾದಂಬರಿಕಾರ ತಾವು ಅವಲೋಕಿಸಿರುವ ಎಲ್ಲಾ ಗ್ರಂಥಗಳ ಪಟ್ಟಿಯನ್ನು ಕೊಡುವುದರ ಮೂಲಕ ತಮ ಋಣವನ್ನು ನಿವೇದಿಸಿರುವರು. ಇದರಿಂದ ಅವರು ವಿಫುಲ ಸಾಮಗ್ರಿಯನ್ನು ಸಂಗ್ರಹಿಸಿರುವುದು ತಿಳಿಯುತ್ತದೆ. ಹಾಗೂ ತಾವು ಏನನ್ನೂ ಸ್ವಕಪೋಲ ಕಲ್ಪಿತವಾಗಿ ಬರೆದಿಲ್ಲ ಎಂದು ವಾಚಕರಿಗೆ ಮನದಟ್ಟು ಮಾಡಲು ಆಶಿಸಿದ್ದಾರೆ. ಇಷ್ಟೊಂದು ಅಪಾರ ವಸ್ತುರಾಶಿಯನ್ನು ಕಾದಂಬರಿಯಂತಹ ಒಂದು ಕಲಾಕೃತಿಯಲ್ಲಿ ಹೇಗೆ ಅಭಿವ್ಯಕ್ತಿಸಬೇಕೆಂಬ ಸಮಸ್ಯೆ ಕಾದಂಬರಿಯನ್ನು ತೀವ್ರವಾಗಿ ಕಾಡಿರುವ ವಿಚಾರ ಕೃತಿಯಲ್ಲಿ ಪದೇ ಪದೇ ವ್ಯಕ್ತವಾಗಿದೆ. ಇತಿಹಾಸದ ಸಾಮಗ್ರಿ ಎಷ್ಟೇ ವಿಪುಲವಾಗಿರಲಿ, ವಿಪುಲತೆಯ ಅಂತಃಸತ್ವವು ಕಲಾಕೃತಿಯಲ್ಲಿ ಮೂಡಬೇಕು. ಭೈರಪ್ಪನವರ ವಿಪರೀತ ಪರಿಶ್ರಮ ಮೆಚ್ಚುವಂಥದ್ದು. ಆದರೆ ಅದು ಕಲೆಯಾಗದಿರುವುದು ಕೊರತೆ ಎನಿಸುತ್ತದೆ.

ಹಮದ್‌ಲ್ಲಾಹ್ ಇಸ್ಲಾಂ ವ್ಯವಸ್ಥೆಯ ಪ್ರತಿನಿಧಿಯಾದರೆ ಲಕ್ಷ್ಮಿ ಹಿಂದೂ ಧರ್ಮದ ಪ್ರತಿನಿಧಿಯಂತೆ ಇದ್ದಾಳೆ. ಹಮದುಲ್ಲಾಹ್‌ನ ಮಾತುಗಳು ಆಪ್ತ ಸಂವಾದಗಳಂತಿರದೆ ರಾಜಕೀಯ ವಾದಗಳಾಗಿ ಭಾಷಣಗಳಾಗಿ ಕಾಣುತ್ತವೆ. ಹಾಗೆಯೇ ಲಕ್ಷ್ಮಿ... ಮಾತುಗಳು ಹಿಂದು ವ್ಯವಸ್ಥೆಯ ಸಮರ್ಥನೆಯಾಗಿ ಗೋಚರಿಸುತ್ತದೆ. ಅಷ್ಟೆಲ್ಲ ಇದ್ದರೂ ಈ ಇಬ್ಬರನ್ನು ಅವರವರ ಮತಗಳ ಅತ್ಯುತ್ತಮ ವ್ಯಕ್ತಿಗಳೆಂದು ಕಾಣಲು ಸಾಧ್ಯವಿಲ್ಲ. ಏಕೆಂದರೆ ಅವರು ಸಾರ್ವತ್ರಿಕ ತತ್ವಾದರ್ಶಗಳ ಗಣಿಗಳಾಗಿಲ್ಲ.

ಮಾರ್ಕ್ಸ್‌ವಾದದ ಕಡೆಗೆ ವಾಲಿ ಜಾಡಿ ನಿರ್ನಾಮವಾಗಬೇಕೆಂದು ಅಮೀರನನ್ನು ಮದುವೆಯಾಗಿ ಮುಸ್ಲಿಂ ಆಗಿದ್ದ ಲಕ್ಷ್ಮಿ ಮತ್ತೆ ಹಿಂದೂ ಮತಕ್ಕೆ ಅಂದರೆ ಬ್ರಾಹಣ ಧರ್ಮದ ಜಾತಿ ಪದ್ಧತಿಗೆ ವಾಪಸ್ಸು ಬರುತ್ತಾಳೆ. ಅವಳು ಎಷ್ಟು ಸಲೀಸಾಗಿ ಇಸ್ಲಾಂಗೆ ಹೋಗಿದ್ದಳೋ ಅಷ್ಟೇ ಸರಾಗವಾಗಿ ತನ್ನ ಜಾತಿಗೆ ಹಿಂದಿರುಗಿಬಿಡುತ್ತಾಳೆ. ಇದು ತೀರಾ ಯಾಂತ್ರಿಕವಾಗಿ ಬರುವಷ್ಟು ಸುಲಭದ ವಿಷಯವಲ್ಲ. ಆಕೆ ನಿಜವಾಗಿಯೂ ಭಾವ ರಾಗ ತೀವ್ರತೆ ಇದ್ದ ವ್ಯಕ್ತಿಯಾಗಿದ್ದರೆ ಅವಳಲ್ಲಿ ಮಾನಸಿಕ ಹೋರಾಟ ನಡೆಯುತ್ತಿತ್ತು. ಆದರೆ ಅವಳಲ್ಲಿ ಈ ಬಗ್ಗೆ ತೊಳಲಾಟ ಇಲ್ಲ. ಆದ್ದರಿಂದ 'ಆವರಣ' ವಾದದೃಷ್ಟಿಯ ಕಾದಂಬರಿಯಾಗುತ್ತದೆ.

ಭೈರಪ್ಪನವರ ಶಕ್ತಿ ಮತ್ತು ಆಸಕ್ತಿಗಳೆಲ್ಲ ಒಂದೇ ಗುರಿಯ ಮತ್ತು ಕ್ರೌರ್ಯ ತುಂಬಿಕೊಂಡಿದೆ. ಅದನ್ನು ಈ ಕೃತಿ ತನ್ನ ಪೂರ್ವನಿರ್ಧಾರಿತ ಉದ್ದೇಶಕ್ಕಿಂತಲೂ ಹೆಚ್ಚಾಗಿಯೇ ಈಡೇರಿಸುತ್ತದೆ. ಆದರೆ ಮುಸ್ಲಿಮರ ಮೇಲೆ ಹಿಂದೂಗಳ ದ್ವೇಷ ಹೆಚ್ಚಿಸುತ್ತದೆಂದು ತಿಳಿಯಬಾರದು. ಕಾದಂಬರಿಯಲ್ಲಿ ಅಲ್ಲಿ ಇಲ್ಲಿ ಒಂದೆರಡು ವಾಕ್ಯಗಳಲ್ಲಿ ಹಿಂದೂ ಜಾತಿ ವ್ಯವಸ್ಥೆ, ದೇವಾಲಯಗಳೂ, ದೇವಸ್ಥಾನಗಳು ಇವುಗಳನ್ನು ಕುರಿತು ಲಘು ಟೀಕೆ ಇಣುಕುತ್ತದೆ. ಇದನ್ನು ತಂದಿರುವುದು ಲೇಖಕ ಏಕಮುಖವಾಗಿಲ್ಲ ಎಂದು ತೋರುವುದಕ್ಕಾಗಿ. ಆದರೆ ಅವಾವೂ ಕಾದಂಬರಿಯ ಒಡಲಲ್ಲಿ ಪ್ರಮುಖವಾಗುವುದಿಲ್ಲ. ಇದರಿಂದ ಲೇಖಕ ವಸ್ತುನಿಷ್ಠನಾಗಿದ್ದಾನೆ. ಆತ ಯಾವ ಮತದ ಕಡೆಗೂ ಇಲ್ಲ ಎಂದು ಹೇಳಲಾಗದು.

ಒಂದು ದೃಷ್ಟಿಯಿಂದ ನೋಡಿದಾಗ ಆವರಣವನ್ನು ಮುಸ್ಲಿಮರನ್ನು ಬೈಯುವುದಕ್ಕಾಗಿಯೇ ಬರೆಯಲಾಗಿದೆ ಎಂದು ಅನ್ನಿಸಬಹುದು. ಇನ್ನೊಂದು ದೃಷ್ಟಿಯಿಂದ ಗಮನಿಸಿದಾಗ ಹಿಂದೂಗಳಲ್ಲಿ ಒಂದು ಜನಾಂಗದ ವಿರುದ್ಧ ದ್ವೇಷವನ್ನು ಬೆಳೆಸುವುದಕ್ಕಾಗಿ ಈ ಕಾದಂಬರಿಯನ್ನು ಬರೆದಂತಿದೆ ಎನ್ನಿಸುವುದು ಸಹಜ. ಆದರೆ ಈ ಎರಡೂ ದೃಷ್ಟಿಗಳೂ ನಿಜವಾಗಿಯೂ ಆರೋಗ್ಯಕರವಾದವುಗಳಲ್ಲ. ಈಗ ಮುಸ್ಲಿಮರನ್ನು ದೇಶದಿಂದ

ಕಳಿಸಲು ಆಗದ ಕೆಲಸ ಎಂದು ಸಂಬಂಧಪಟ್ಟವರು ಅರಿಯುಬೇಕಾಗಿದೆ. ಅವರಲ್ಲಿ ಶೇಕಡ ತೊಂಭತ್ತು ಜನಸಂಖ್ಯೆ ಸ್ಥಳಿಯು ಅವಮಾನಿತ ತಬ್ಬಲಿ ಜನಾಂಗಗಳಿಂದ ಮತಾಂತರವಾದವರು. ಆದ್ದರಿಂದ ಅವರನ್ನು ದ್ವೇಷ ಮಾಡುತ್ತ ಬದುಕಲು ಆಗದ ಮಾತು. ಸಹಬಾಳ್ವೆಯು ಸಾಮಾಜಿಕ ಶಾಂತಿಗೆ ಸಂಜೀವಿನಿ. 'ಆವರಣ'ದ ಒಂದು ಮುಖ್ಯ ಪಾತ್ರ ಹಾಜಿ ಹಮದಲ್ಲಾಹ್. ಈತ ಮುಸ್ಲಿಂ ವ್ಯವಸ್ಥೆಯು ಪ್ರತಿಪಾದಕ. ಸಮರ್ಥ ಹಾಗೂ ನಿರೂಪಕ.

ಮತೀಯುವಲ್ಲದ ಲೌಕಿಕ ವಾದವನ್ನು ಪಾಲಿಸಿದ ಸಾಮ್ರಾಟ ಅಕ್ಬರನನ್ನು ಧರ್ಮಲಂಡನೆಂದು ಕರೆಯುವಷ್ಟು ಇವನ ಮತಾಂಧತೆ ಭಯುಂಕರವಾಗಿದೆ. ಇದರಿಂದ ಇಸ್ಲಾಮಿನ ವಿದ್ಯಾವಂತ ವರ್ಗ ಬೌದ್ಧಿಕವಾಗಕಿ ಎಷ್ಟು ಅಧೋಗತಿಗೆ ಇಳಿದಿದೆ ಎಂದು ತಿಳಿಯುಬಹುದು. ಲೇಖಕನ ಮುಖವಾಣಿಯಾಗಿ ಲಕ್ಷ್ಮಿ ಪಾತ್ರವಿದೆ. ಈಕೆ ಕುಣಿಗಲ್ ತಾಲ್ಲೂಕಿನ ಒಂದು ಹಳ್ಳಿಯು ಗೌಡರ ಮಗಳು. ಇವಳು ಇಸ್ಲಾಂ ನಲ್ಲಿ ಬಾಳಿ ಬೇಸತ್ತು ಅದನ್ನು ತ್ಯಜಿಸಿದ್ದಾಳೆ. ಆದ್ದರಿಂದ ಇಸ್ಲಾಂ ಬಗ್ಗೆ ಈಕೆ ದೃಷ್ಟಿ ಸರಿಯಾದುದು, ಹಾಗೂ ಅಧಿಕೃತವಾದುದು ಎಂಬ ಅಭಿಪ್ರಾಯುವನ್ನು ಮೂಡಿಸುವುದು ಕಾದಂಬರಿಯು ಉದ್ದೇಶವಾಗಿದೆ. ಆದರೆ ತಲಾಕ್ ಎಂಬ ಅನಿಷ್ಟ ಪದ್ಧತಿ ಇದ್ದರೂ ಅಸಂಖ್ಯಾತ ಮುಸ್ಲಿಂ ಸಂಸಾರಗಳು ಸುಖದಿಂದಿವೆ ಎಂಬುದನ್ನು ಮರೆಯುಲಾಗದು. ಓದುಗರಿಗೆ ಇಲ್ಲಿ ಒಂದು ಪ್ರಶ್ನೆ ಏಳಬಹುದು. ಲಕ್ಷ್ಮಿ ಏಕೆ ಗೌಡರ ಹುಡುಗಿ ಆಗಿರಬೇಕು ಅವಳನ್ನೇಕೆ ಬ್ರಾಹಣ ಯುವತಿಯುನ್ನಾಗಿ ಲೇಖಕ ಮಾಡಿಲ್ಲಲ ಒಕ್ಕಲಿಗ ಹುಡುಗಿಯುರು ಇಸ್ಲಾಮಿಗೆ ಮತಾಂತರ ಹೊಂದಿರುವ ವಿಷಯು, ನನಗೆ ತಿಳಿದಂತೆ ಇಲ್ಲ. ಆದರೆ ಬ್ರಾಹಣ ಮಹಿಳೆಯುರು ಮುಸ್ಲಿಂ ಗಂಡಸರನ್ನು ಮದುವೆಯಾಗಿ ಪರಿವರ್ತನೆ ಆಗಿರುವ ಪ್ರಸಂಗಗಳು ಸಾಕಷ್ಟಿವೆ. ಅಂಥಾದ್ದರಲ್ಲಿ ಏಕೆ ಲಕ್ಷ್ಮಿಯುನ್ನು ಲೇಖಕಿ ಒಕ್ಕಲಿಗೆ ಕನ್ಯೆಯುನ್ನಾಗಿ ಮಾಡಿದ್ದಾರಲ್ಲ ಕಾದಂಬರಿಕಾರನಿಗೆ ಸ್ವಾತಂತ್ರ್ಯವಿದೆ ಎನ್ನುವುದು ಬೇರೆ ವಿಷಯು. ಬಹುಶಃ ಹಿಂದುಮುಸ್ಲಿಂ ಕೋಮು ಗಲಭೆಯಾದರೆ ಹೊಡೆದಾಟಕ್ಕೆ ಒಕ್ಕಲಿಗರೇ ಸರಿ, ಬ್ರಾಹಣರಲ್ಲ ಎಂದು ಕಾದಂಬರಿಕಾರನ ವ್ಯವಹಾರಿಕ ಹಾಗೂ ಅನೂಕೂಲಕರ ದೃಷ್ಟಿ ಇರಬಹುದು.

ನಮ್ಮ ನಡುವಿನ ಒಬ್ಬ ಸಮಾಜವಾದಿ ಸಾಹಿತಿ ಪ್ರೊ. ಶಾಸ್ತ್ರಿಯುನ್ನು ಭೈರಪ್ಪ ಚೆನ್ನಾಗಿ ಚಿತ್ರಿಸಿ, ಪರಿಣಾಮಕಾರಿಯಾಗಿ ವಿಡಂಬಿಸಿದ್ದಾರೆ. ಈತನ ಸಮಯು ಸಾಧಕತನ, ಲಂಪಟತ್ವ, ಸೋಮಾರಿತನ, ಹೆಸರಿನ ಹುಚ್ಚು ಸರ್ಕಾರಿಕಾರ್ಯುಕ್ರಮಗಳಿಗೆ ಟಿ.ಎ., ಡಿ.ಎ.ಗಾಗಿ ಭಾಗವಹಿಸುವುದು ಇವೆ ಮುಂತಾದವುಗಳೆಲ್ಲ ಸಹಜವಾಗಿ ಬಂದಿವೆ. ಶಾಸ್ತ್ರಿಯು ಅಮ್ಮ ಸತ್ತ ದಿನ ಅವನು ಕ್ರಾಂತಿಕಾರಿ ಎಂದು ತೋರಿಸಿಕೊಳ್ಳಲು ಗೋಮಾಂಸ ತಿನ್ನುತ್ತೇನೆಂದು ತಾಲ್ಲೂಕಿನ ಹೋಟೆಲಿನಲ್ಲಿ ಅದನ್ನು ಕೇಳುವುದು ಅವನ ಅಪ್ರಾಮಾಣಿಕತೆ.

ಇಂಥವನು ಉತ್ತರ ಇಂಡಿಯಾಕ್ಕೆ ಹೋದಾಗ ಗಯಾದಲ್ಲಿ ತಲೆ ಬೋಳಿಸಿಕೊಂಡು ಕಾಶಿಯುಲ್ಲಿ ತಾಯಿಗೆ ಪಿಂಡ ಅರ್ಪಿಸುತ್ತಾನೆ.

ಇದು ಅವನ ಎಡಬಿಡಂಗಿತನವನ್ನು ಎತ್ತಿ ತೋರಿಸುತ್ತದೆ. ಮತ್ತು ಅವನ ಹುಚ್ಚಿತನ. ಇವನು ಮದುವೆಯಾಗಿರುವುದು ಕ್ರಿಶ್ಚಿಯುನ್ ಮಹಿಳೆ. ಈತನ ಮಗಳು ಅರುಣ ಮದುವೆಯಾಗಿರುವುದು ಮುಸ್ಲಿಂ ಹುಡುಗ ನಜೀರನನ್ನು. ಇಂಥ ಪ್ರೊ. ಶಾಸ್ತ್ರಿಯುನ್ನು ... ಸಾಹಬ್, ನೀವೇಕೆ ಹೆಸರು ಬದಲಾಯಿಸಿಕೊಂಡಿಲ್ಲ ಎಂದರೆ, ನನ್ನ ಅಪ್ಪ ಅಮ ಎಷ್ಟು ಫೂಲಿಷ್ ಅನ್ನೋದರ ನೆನಪಿಗೆ ಇನ್ನೂ ಅದೇ ಹೆಸರು ಇಟ್ಕೊಂಡಿದ್ದೇನೆ ಎಂದು ಉತ್ತರಿಸುತ್ತಾನೆ. ಈ ಪಾತ್ರದಿಂದ ಓದುಗರಿಗೆ ಒಳ್ಳೆಯು ಮನೋರಂಜನೆ ಲಭಿಸಿದೆ.

ಆದರೆ ಒಳಗೆ ಕಾದಂಬರಿಕಾರನಿಗೆ ಇಂಥವರ ಬಗ್ಗೆ ಉಗ್ರ ವಿರೋಧವಷ್ಟೇ ಅಲ್ಲದೆ ದ್ವೇಷ ಕೂಡ ಇದೆ. ಎಲ್ಲಾ ಪ್ರಗತಿಪರ ಮಾನವೀಯ ಆಲೋಚನೆಗಳನ್ನು ಕಾದಂಬರಿ ತಿರಸ್ಕರಿಸುವುದು ಸ್ಪಷ್ಟ. ಅದು ಕಾಶಿಯ ಕೊಳಕಿನಲ್ಲಿ ಇರಲು ಇಷ್ಟಪಡುತ್ತದೆ.

ಕಾದಂಬರಿ ಮತ್ತು ಅಜ್ಞಾನದ ಆಗರವಾದ ದೇವಸ್ಥಾನ ಸಂಸ್ಕೃತಿಯನ್ನು ಕಾಪಾಡಲು ಭೈರಪ್ಪ ಹೆಣಗಿದ್ದಾರೆ. ಔರಂಗಜೇಬನ ಮಸೀದಿಯ ಎತ್ತರದ ಮೀನಾರಗಳನ್ನು ನೋಡಿದ ನನ್ನಲ್ಲಿ ಒಬ್ಬ ಹಿಂದುವಿನ ಭಾವನೆಯು ಜಾಗೃತವಾಯಿತು. ಕಣ್ಣಿನಲ್ಲಿ ಜಾಗೃತವಾಯಿತು. ಕಣ್ಣಿನಲ್ಲಿ ವ್ಯಥೆಯುಂಟುಮಾಡುವ ಈ ಜಗಳಕ್ಕೆ ಮುಕ್ತಾಯ ಹಾಕಿ ಸರ್ಕಾರವು ಈ ಪವಿತ್ರ ನಗರಿಯ ಆ ಸ್ಥಲವನ್ನು ಅದರ ಹಿಂದಿನ ಮಾಲೀಕರಿಗೆ ವಾಪಸ್ಸು ಕೊಡಬೇಕು ಎಂದು ನಾನು ಆಲೋಚಿಸಿದೆ ಎಂದು ವಿದೇಶಿಯನ ಅಭಿಪ್ರಾಯವನ್ನು ಲಕ್ಷ್ಮಿ ಉಲ್ಲೇಖಿಸಿ ಅನುಮೋದಿಸುತ್ತಾಳೆ. ಈ ಮಾತಿನಂತೆ ನಡೆದುಕೊಳ್ಳುವುದಾದರೆ ಹಿಂದೂಗಳ ವಶದಲ್ಲಿ ಇರುವ ಜೈನ ಬೌದ್ಧ ದೇವಾಲಯಗಳನ್ನೆಲ್ಲ ಅವರವರಿಗೆ ಕೊಡಬೇಕಾಗುತ್ತದೆ.

ಕಾಶಿಯಲ್ಲಿ ನಿತ್ಯ ನೂರಾರು ಪೊಲೀಸರು ವಿಶ್ವನಾಥ ದೇವಸ್ಥಾನದ ಪಕ್ಕದಲ್ಲಿರುವ ಔರಂಗಜೇಬನ ಮಸೀದಿಯನ್ನು ಕಾಯುತ್ತಿರುವ ವಿಷಯ ಅದೇಕೋ ಕಾದಂಬರಿಯಲ್ಲಿ ಬಂದಿಲ್ಲ. ಇತಿಹಾಸವನ್ನು ಕಾದಂಬರಿಯಾಗಿ ರಚಿಸುತ್ತಿರುವ ಲಕ್ಷ್ಮಿ ಇತಿಹಾಸಕಾರನಿಗಿಂತ ಹೆಚ್ಚು ಸಹಾನುಭೂತಿಯಿಂದ ಇರಬೇಕಾಗುತ್ತದೆ.

ಇತಿಹಾಸಕಾರನಿಗೆ ಘಟನಾವಳಿ ಮುಖ್ಯ. ಸಾಹಿತಿ ಈ ಘಟನಾವಳಿಗಳ ಅಸ್ಥಿಪಂಜರಕ್ಕೆ ಮಾಂಸ ತುಂಬಿ ಜೀವ ಕೊಡಬೇಕಾಗುತ್ತದೆ. ಲಕ್ಷ್ಮಿಗೆ ಅನ್ವೇಷಣ ದೃಷ್ಟಿಗಿಂತ ವಾದದ ಮನೋಭಾವ ಪ್ರಮುಖವಾಗಿದೆ. ಔರಂಗಜೇಬ ಮತಾಂಧತೆಯನ್ನು ಕಾದಂಬರಿ ಹೇಳುತ್ತದೆ. ಆದರೆ ಅವನು ಎಷ್ಟೊಂದು ದೇವಸ್ತಾನಗಳನ್ನು ನೆಲಸಮ ಮಾಡಿದ ಎಂದು ಸರಿಯಾಗಿ ತಿಳಿಸಿಲ್ಲ. ಅವನ ಮತಾಂಧತೆಯ ಫಲವಾಗಿ ಸಾವಿರಾರು ದೇವಾಲಯಗಳು ಚೂರು ಚೂರು ಮಾಡಿಸಿದನು. ಅವನ ಮತಾಂಧತೆಯ ಫಲವಾಗಿ ಸಾವಿರಾರು ದೇವಾಲಯಗಳು ಅವಶೇಷಗಳಾದವು. ಅವುಗಳು ಸಾವಿರ ವರ್ಷದ ಇಂಡಿಯಾದ ಕಲೆಯನ್ನು ಪ್ರತಿನಿಧಿಸಿದ್ದವು. ಅಥವಾ ಕಲೆಗೆ ನೆಲೆಯಾಗಿದ್ದವು. ಇಂದಿನ ಭಾರತವನ್ನು ನೋಡಿ, ಎಂಥ ಕಲಾವೈಭವ ಮತ್ತು ಸೌಂದರ್ಯ ಭಾರತದಲ್ಲಿ ಇತ್ತು ಎಂದು ನಾವೆಂದೂ ತಿಳಿಯಲು ಬೌದ್ಧಿಕ ಎತ್ತರ ಕಾದಂಬರಿಯಲ್ಲಿ ಕಾಣಿಸುವುದಿಲ. ವಿಗ್ರಹಭಂಜನೆ ಮತ್ತು ಮಂದಿರಗಳ ನಾಶವನ್ನು ಕೆಲವರು ಮುಸಲಾನ ದೊರೆಗಳು ಪ್ರತಿಕಾರ ರೂಪದಲ್ಲಿ ಮಾಡಿರುವುದು ನಿಜವಾದರೂ ಹಿಂದೂಗಳೇನೂ ಇಂತಹ ಕೃತ್ಯಗಳಲ್ಲಿ ಹಿಂದೆ ಬಿದ್ದಿಲ್ಲ. ವಿಜಯನಗರದಲ್ಲಿ ಶೈವ ಮತ್ತು ವೈಷ್ಣವರು ಅನಾಗರಿಕ ಮಟ್ಟದಲ್ಲಿ ಹೋರಾಡಿ ರಕ್ತದ ಕಾಲುವೆ ಹರಿಸಿದುದನ್ನು ಇತ್ತೀಚಿನ ಸಂಶೋಧನೆಗಳು ಬೆಳಕಿಗೆ ತಂದಿವೆ.

ಲಕ್ಷ್ಮಿ ಬರೆದ ಕಾದಂಬರಿಯಿಂದ ಸಾಮಾಜಿಕ ಶಾಂತಿಗೆ ಭಂಗ ಬರುತ್ತದೆ ಎಂದು ಪೊಲೀಸರು ಅವಳ ಮೇಲೆ ಕೇಸು ಹಾಕುವ ತರಾತುರಿಯಲ್ಲಿ 'ಆವರಣ' ಕಾದಂಬರಿ ಕೊನೆಯಾಗುತ್ತದೆ.

'ಆವರಣ' ಆಕರ್ಷಕವಾಗಿ ಓದಿಸಿಕೊಳ್ಳುತ್ತದೆ. ಭಾಷೆ ಕ್ಲಿಷ್ಟವಿಲ್ಲದೆ ಸರಳವಿರುವುದು ಇದಕ್ಕೆ ಕಾರಣ ಕೃತಿ ಪ್ರತಿಪಾದಿಸುತ್ತಿರುವುದು ಬ್ರಾಹ್ಮಣವಾದವೇ ಹೊರತು ಮಾನವತಾವಾದವಲ್ಲ, ಮಾನವ ಸೌಖ್ಯ ಎಲ್ಲಾ ಮೂಲಭೂತವಾದಗಳ ನಿರಾಕರಣೆ ಮತ್ತು ವಿಸರ್ಜನೆಗಳಲ್ಲಿ ಅಡಗಿದೆ. ಜಗತ್ತಿನ ಇತಿಹಾಸವೆಲ್ಲ ಜಾತಿ ಮತಗಳ ಕಚ್ಚಾಟದ, ಮಾನವರನ್ನು ಕತ್ತರಿಸಿದ

ಯುದ್ಧಗಳಿಂದ ಹರಿದ ರಕ್ತದ ಹೊಳೆಯು ಕಥೆ ಒಂದು ಕಡೆಯಾದರೆ, ಈ ಭಯಂಕರ ಸಾವು ನೋವುಗಳ ಮಧ್ಯದಲ್ಲಿ ಚಂದ್ರನ ತಂಪು ಕಿರಣಗಳ ಹಾಗೆ ಅಖಂಡ ಮಾನವ ಪ್ರೇಮವನ್ನು ಮಳೆಗರೆದ ಸಂತರ ಮಹಂತರ ಅನುಭಾವಿಗಳ ಜೀವನ ಮತ್ತು ಅಮೃತವಾಣಿ ಇನ್ನೊಂದು ಕಡೆಗಿದೆ.

ಕಾದಂಬರಿಯಲ್ಲಿ ಇತಿಹಾಸದ ಚಿತ್ರಣವನ್ನು ನೀಡುವಾಗ ಸಾಹಿತಿ ಐತಿಹಾಸಿಕ ಸತ್ಯ ಘಟನೆಗಳಿಗೆ ಬದ್ಧನಾಗಿ ಸಾಕ್ಷೀಭೂತವಾಗಿರಬೇಕೆ ಹೊರತು ಕಲೆಯ ಹೆಸರಿನಲ್ಲಿ ಸತ್ಯಕ್ಕೆ ಅಪಚಾರವನ್ನು ಎಸಗಬಾರದು. ಇತಿಹಾಸದಲ್ಲಿ ನಡೆದು ಹೋದ ಘಟನೆಗಳು ಹಿತಕರವಾಗಿರಲಿ ಇಲ್ಲವೇ ಅಹಿತಕರವಾಗಿರಲಿ, ಅದಕ್ಕೆ ಇಂದಿನ ಪೀಳಿಗೆಯವರು ಜವಾಬ್ದಾರರಲ್ಲ. ಆದರೆ, ಸರಿತಪ್ಪುಗಳನ್ನು ತೂಗಿ ನೋಡುವ ಮನೋ ಔದಾರ್ಯ ಅಂತಸ್ಸತ್ವ ಮುಖ್ಯವಾಗಿರಬೇಕು. ಅಂಥಾ ತಪ್ಪುಗಳು ಮತ್ತೊಮ್ಮೆ ಮರುಕಳಿಸದಂತೆ ಎಚ್ಚರವಹಿಸುವ, ಸುಧಾರಣೆಯತ್ತ ಮುಂದಿನ ಪೀಳಿಗೆಯನ್ನು ಕೊಂಡೊಯ್ಯುವ ದಿಸೆಯಲ್ಲಿ, ಮುನ್ನಡೆಯುವ ದಿಟ್ಟತನ ಅವನಗಿರಬೇಕು. ಆಗಲೇ ಜಾತ್ಯತೀತ, ಧರ್ಮಾತೀತ ಸಮಾಜ ನಿರ್ಮಾಣಗೊಳ್ಳಲು ಸಾಧ್ಯ. ಹಾಗಿಲ್ಲದೆ, ಅಮಾನವೀಯ ಘಟನೆಗಳು ನಡೆದೇ ಇಲ್ಲವೆಂದು, ಅವೆಲ್ಲವೂ ಕೇವಲ ಕಲ್ಪಿತವೆಂದೂ, ಅವುಗಳನ್ನು ದಾಖಲಿಸುವವರನ್ನು ಮತಾಂಧರು, ಕೋಮುವಾದಿಗಳು, ಭಯೋತ್ಪಾದಕರು ಎಂದೂ ಹೆಸರಿಸಿ ಸತ್ಯದ ಸಮಾಧಿ ಮಾಡಹೊರಟಿರುವುದು ಇಂದಿನ ವಿಪರ್ಯಾಸ. ಅಧಿಕಾರದ ಗದ್ದುಗೆಯನ್ನು ಸದಾ ತಮದಾಗಿಸಿಕೊಳ್ಳಬೇಕೆಂಬ ಹುನ್ನಾರದಲ್ಲಿರುವ ರಾಜಕಾರಣಿಗಳಿಗೆ ಸತ್ಯಅಸತ್ಯಗಳು ಮುಖ್ಯವಲ್ಲ. ಅದನ್ನು ಉಳಿಸಿಕೊಳ್ಳುವ ಸಲುವಾಗಿ, ಅಧಿಕಾರ ಬಲದಿಂದ, ಕಾನೂನಿನ ಚಾವಟಿಯಿಂದ ಸತ್ಯಕ್ಕೆ ಅಸತ್ಯದ 'ಆವರಣ'ವನ್ನು ಶಾಂತಿ, ನೆಮ್ಮದಿ, ಸೌಹಾರ್ದತೆಗಳ ಸೋಗಿನಲ್ಲಿ ಬಿಂಬಿಸಲು ಯತ್ನಿಸುತ್ತಿರುವುದು ಇಂದಿನ ದೌರ್ಭಾಗ್ಯ.

ಅದಕ್ಕಿಂತಲೂ ಹೀನಾಯವಾದ ಸಂಗತಿ ಎಂದರೆ ಅಂಥ ರಾಜಕಾರಣಕ್ಕೆ ಇಂಬುಗೊಡುತ್ತಿರುವ ಕೆಲವು ಸ್ವಾರ್ಥ ಸಾಹಿತಿಕಲಾವಿದರ ಗೋಸುಂಬೆತನ, ಅನಾವರಣಗೊಳ್ಳುತ್ತಾ ಹೋದಂತೆ ಓದುಗರನ್ನು ದಿಗ್‌ಭ್ರಮೆಗೊಳಿಸುತ್ತದೆ.

ಸರ್ಕಾರ ವಹಿಸಿದ ಹಂಪಿಯ ಸಾಕ್ಷ್ಯ ಚಿತ್ರನಿರ್ಮಾಣ ಕಾರ್ಯಕ್ಕಾಗಿ ಸ್ಥಳ ಪರಿಶೀಲನೆ ಹಾಗೂ ಕ್ಷೇತ್ರಾಧ್ಯಯನಕ್ಕಾಗಿ ಹಂಪಿಯ ಪ್ರವಾಸಿ ಬಂಗಲೆಯಲ್ಲಿ ತಂಗಿದ್ದ ರಜಿಯಾಳು ಕಂಡ ದೃಶ್ಯಗಳು ಆ ಬಗ್ಗೆ ಸಿಕ್ಕ ಮಾಹಿತಿಗಳಿಂದ ಅವಳ ಮನಸ್ಸು ಐತಿಹಾಸಿಕ ಸತ್ಯಅಸತ್ಯಗಳ ಬಗ್ಗೆ ತೂಗುಯ್ಯಾಲೆಯಾಡತೊಡಗುತ್ತದೆ. ಈ ಕಾರ್ಯದ ನಿರ್ದೇಶನಕ್ಕಾಗಿ ಜೊತೆಯಲ್ಲೇ ಬಂದಿದ್ದ ವಿಚಾರವಾದಿ, ಪ್ರಗತಿಶೀಲ ಮನೋಭಾವದ ಗಂಡ ಅಮೀರ್ ಅವರ ಈ ಅಭಿಪ್ರಾಯದ ಬಗ್ಗೆ ಭಿನ್ನಮತ ತೋರುತ್ತಾನೆ. ಆದರೆ, ವೈಚಾರಿಕ ನೆಲೆಗಟ್ಟಿನ ಮೇಲೆ ಕೆಲಸ ಮಾಡುತ್ತಿದ್ದ ಅವಳ ಮನಸ್ಸು ಈ ಭಾರಿ ಸತ್ಯವನ್ನು ಮರೆಮಾಚಿ ಅಸತ್ಯವನ್ನು ವೈಭವೀಕರಿಸುವ ಸ್ಕ್ರಿಪ್ಟ್ ಬರೆಯಲು ಒಪ್ಪುವುದಿಲ್ಲ. ಆದರ್ಶದ ಯೌವನದ, ಕನಸಿನ ಕಾವಿಳಿದ ಅವಳ ಮನಸ್ಸು ತನ್ನ ಬದುಕಿನಲ್ಲಿ ನಡೆದ ಘಟನೆಗಳ ಬಗ್ಗೆ ಮೆಲುಕು ಹಾಕುತ್ತಾ ಸಾಗುವಲ್ಲಿ ಕಾದಂಬರಿ ನಮ್ಮೆದುರು ಅನಾವರಣಗೊಳ್ಳುತ್ತಾ ಸಾಗುತ್ತದೆ.

ಅಪ್ಪಟ ಗಾಂಧೀವಾದಿ, ಅಹಿಂಸಾವೃತ್ತಿ, ಶಾಂತ ಸ್ವಭಾವಿ, ಜಾತಿ ಬೇಧವನ್ನು ಲೆಕ್ಕಿಸದೆ ಹರಿಜನವಾದಿ, ತೋಟತುಡಿಕೆಗಳನ್ನು ರೂಢಿಸಿಕೊಂಡು, ಸಮಾಜ ಸೇವೆಯಲ್ಲಿ ನಿರತರಾಗಿ, ಸಾತ್ವಿಕ ಬದುಕು ನಡೆಸುತ್ತಿದ್ದ ನರಸಿಂಹೇಗೌಡರ ಮಗಳು ಲಕ್ಷ್ಮಿ ಪುಣೆಯ ಫಿಲ್ಮ್ ಇನ್‌ಸ್ಟ್ಯೂಟ್‌ನಲ್ಲಿ ತರಬೇತಿ ಪಡೆಯುತ್ತಿದ್ದ ದಿನಗಳಲ್ಲಿ ಅವಳಿಗೆ ಕರ್ನಾಟಕ ಅದರಲ್ಲೂ

ಬೆಂಗಳೂರಿನವನಾದ ಅಮೀರನ ಪರಿಚಯವಾಗುತ್ತದೆ. ಸ್ನೇಹವಾಗಿ, ಕ್ರಮೇಣ ಆ ಪರಿಚಯ ಸ್ನೇಹ ಪ್ರೇಮವಾಗಿ ಕೊನೆಗೆ ಮದುವೆಯ ಹಂತ ತಲುಪುತ್ತದೆ. ಇಬ್ಬರೂ ಪರಸ್ಪರ ಭಿನ್ನ ಧರ್ಮೀಯರಾದುದರಿಂದ ವಿವಾಹದ ವಿಚಾರದಲ್ಲಿ ತೊಡಕುಂಟಾಗುತ್ತದೆ. ಯಾವ ಧರ್ಮದಲ್ಲೂ ಹುರುಳಿಲ್ಲ, ಧರ್ಮಗಳೆಲ್ಲ ಬಂಡವಾಳಶಾಹಿಗಳ ಏಜಂಟರು ಬಡವರಿಗೆ ಕುಡಿಸಲೆಂದು ಅಫೀಮು. ನಮಗೆ ನಮ್ಮಿಬ್ಬರ ಪ್ರೇಮ ಮುಖ್ಯ. ಧರ್ಮದಲ್ಲಿ ನಮಗೂ ನಂಬಿಕೆ ಇಲ್ಲ. ನಿನಗೂ ಇಲ್ಲ. ನಾವಿಬ್ಬರೂ ಪ್ರಗತಿಪರ ಮನೋಧರ್ಮದವರು. ನೀನು ಧರ್ಮ ಪರಿವರ್ತನೆ ಮಾಡಿಕೊಂಡು ಹೆಸರು ಬದಲಿಸಿಕೊಳ್ಳೋದು ಸದ್ಯದ ಸ್ಥಿತಿಯಲ್ಲಿ ಮಾಡಬೇಕಾಗಿರುವ ಒಂದು ಕಾರ್ಯತಂತ್ರ. ಸಮಾಜ ಬದಲಾಗಿ ಬಡವರ ಅಫೀಮು ಆಗಿರುವ ಧರ್ಮವು ಎಲ್ಲೆಲ್ಲಿಯೂ ನಾಶವಾಗುವ ದಿನ ದೂರವಿಲ್ಲ. ಹೀಗೆಲ್ಲ ಹೇಳಿ ಲಕ್ಷ್ಮಿಯನ್ನು ರಜಿಯಳನ್ನಾಗಿ ಮತಾಂತರಗೊಳಿಸುವಲ್ಲಿ ಅಮೀರ್ ಸಫಲನಾಗುತ್ತಾನೆ. ಅದೇ ಸಂದರ್ಭದಲ್ಲಿ ಮತಾಂತರಗೊಳ್ಳಲು ಸಿದ್ಧಳಾದ ಮಗಳನ್ನು ಕುರಿತು ನರಸಿಂಹೇಗೌಡರು ಹೇಳಿದ ಮಾತುಗಳು ಅವಳಿಗೆ ಪಥ್ಯವಾಗುವುದಿಲ್ಲ. ನಿನ್ನ ಮೇಲೆ ಅವನಿಗೆ ಅಷ್ಟೇ ಪ್ರೀತಿಯಿದ್ದರೆ ಅವನು ಹಿಂದುವಾಗಿ ಹೆಸರು ಬದಲಾಯಿಸಿಕೊಳಲಿ. ನಾನೇ ಧಾರೆ ಎರೆದುಕೊಡುತ್ತೇನೆ.

ನೀನೊಬ್ಬಳು ಏನು ಮಾಡಿಕೊಂಡೆ ಅನ್ನೋದೊಂದೆ ಅಲ್ಲ, ನಿನ್ನ ಹೊಟ್ಟೆಲಿ ಹುಟ್ಟುವ ಮಗುವೋ ಅದರ ಮಗುವೋ ಯಾವುದೊ ಒಂದು ತಲೆಮಾರಿನ ಮಗುವು ನಮ್ಮ ದೇವಸ್ಥಾನವನ್ನು ಒಡೆದು ನಾಶ ಮಾಡುತ್ತೆ.[3] ಅದರ ಪಾಪ ನಿನಗೆ ತಟ್ಟುತ್ತೆ. ಅರ್ಥಮಾಡಿಕೋ ಮಗಳೇಪಪ ಎಂದು ಕೊನೆಯ ಮಾತಾಗಿ ಹೇಳಿದ ಬುದ್ಧಿಮಾತು ಪ್ರೀತಿಯ ಗುಂಗಿನಲ್ಲಿದ್ದ ಅವಳಿಗೆ ಅರ್ಥವಾಗುವುದಿಲ್ಲ. ಸಂದೇಹ ನಿವಾರಣೆಗಾಗಿ ಅಮೀರ್, ನಮ್ಮ ಹೊಟ್ಟೇಲಿ ಹುಟ್ಟುವ ಮಗು ದೇವಸ್ಥಾನ ಒಡೆಯುತ್ತಾಲಪಪ ಎಂದು ಕೇಳಿದಾಗ ನಾನ್‌ಸೆನ್ಸ್ ಮುಸ್ಲಿಮರ ಮುಖಕ್ಕೆ ಮಸಿ ಬಳಿಯಕ್ಕೆ ಅಂತ ಕೋಮುವಾದಿಗಳು ಹುಟ್ಟಿಸೋ ಕಥೆಗಳನ್ನು ನಂಬ್ತೀಯಾಲಪ್ಪ ಎಂಬ ಅವನ ಒಂದು ಮಾತೇ ಅವಳ ಸಂದೇಹ ನಿವಾರಣೆಗಾಗಿ ಸಾಕಾಗಿ, ಲಕ್ಷ್ಮಿ ರಜಿಯಾಳಾಗಿ ಅಮೀರನ ಮಡದಿಯಾಗುತ್ತಾಳೆ.

ಧರ್ಮವೆಲ್ಲ ಬಂಡವಾಳಶಾಹಿಗಳ ಏಜೆಂಟರು ಬಡವರಿಗೆ ಕುಡಿಸಲೆಂದು ತಯಾರಿಸಿದ ಅಫೀಮು ಎಂದು ಪ್ರಗತಿಪರ ವಿಚಾರವನ್ನು ಮುಂದಿಡುತ್ತಲೇ ನಮ್ಮ ಧರ್ಮದಲ್ಲಿರುವ ಗಂಡಸಾಗಲೀ ಹೆಂಗಸಾಗಲೀ ಯಾವುದೇ ಕಾರಣಕ್ಕೆ ಧರ್ಮದಿಂದ ಹೊರಗೆ ಹೋಗುತ್ತಾನೆ ಅಂದರೆ ನಮ್ಮ ಸಮಾಜ ಸಹಿಸಲ್ಲ. ಹೊರಹೋಗುವವರನ್ನು ಕೊಂದುಬಿಡುತ್ತಾರೆ. ಹೋಗೋಕ್ಕೆ ಕಾರಣರಾದೋರನ್ನೂ ಕೊಲ್ತಾರೆ ಎಂಬ ತಮ್ಮ ಧರ್ಮದ ಕಟುಸತ್ಯವನ್ನು ಸಾರಿ ಹೇಳುವ ಅಮೀರನ ದೃಷ್ಟಿಯಲ್ಲಿ ಲಕ್ಷ್ಮಿ ರಜಿಯಾಳಾಗಿ ಪರಿವರ್ತವಾಗುವುದು ಕಂಡುಬರುತ್ತದೆ.

ಇಸ್ಲಾಂ ಧರ್ಮ ಸ್ವೀಕರಿಸಿ, ನಿಕಾಹ್ ಮಾಡಿಕೊಂಡ ವರ್ಷದಲ್ಲಿಯೇ ಗರ್ಭಿಣಿಯಾದ ರಜಿಯಾಳಿಗೆ, ತವರಿನ ಬಯಕೆ ಕಾಡುತ್ತದೆ. ನೀನು ಮತ ಬದಲಾಯಿಸಿ ಹೋದರೆ ನನಗೂ ನನಗೂ ಈ ಜನದಲ್ಲಿ ಮಾತ್ರವಲ್ಲದೆ ಎಂದೆಂದಿಗೂ ಯಾವ ಸಂಬಂಧವೂ ಇಲ್ಲಪ್ಪ ಎಂದು ಹೇಳಿದ ತಂದೆ ಯಾವ ಕಾರಣಕ್ಕೂ ಮಗಳ ಕಡೆ ತಿರುಗಿ ನೋಡುವುದಿಲ್ಲ.

ಯಾರೋ ಯಾವುದೋ ಕಾಲದಲ್ಲಿ ಯಾವುದೋ ಕಾರಣಕ್ಕೆ ಒಂದು ದೇವಸ್ಥಾನ ಒಡೆದದ್ದಕ್ಕೆ ಮಗಳ ಪ್ರೀತಿಯ ಮೇಲೆ ಕಲ್ಲು ಚಪ್ಪಡಿ ಎಳೆದುಕೊಂಡಿದ್ದಾರೆ. ಎಂದು ಹೊಸ ಬದುಕಿನ ಹುರುಪಿನಲ್ಲಿ ತಂದೆಯ ಮೇಲೆಯೇ ತಪ್ಪು ಹೊರಿಸಿ, ತನ್ನ ಬಸಿರಿನ ಬಯಕೆಯನ್ನು ತೀರಿಸಿಕೊಳ್ಳುತ್ತಾಳೆ. ಧರ್ಮ ಹೋಗೋ ತನಕ ಮಾನವೀಯತೆ ಉಳಿಯಲ್ಲ ಎಂದು ಸಾರ ಹೊರಟ ರಜಿಯಾಳಲ್ಲಿ ಆದ ವಿಪರ್ಯಾಸವೆಂದರೆ ತಾನು ಸಾರ್ವಜನಿಕವಾಗಿ,

ಒಂದು ಅನಿವಾರ್ಯವಾಗಿ ಸ್ವಾಟಜಿಂಯಾಗಿ ಸ್ವೀಕರಿಸಬೇಕಾಗಿ ಬಂದ ಧರ್ಮಕ್ಕಿಂತಲೂ ತಾನು ಬಿಟ್ಟು ಬಂದ ಧರ್ಮದ ಮೇಲೆ ದ್ವೇಷ ಹುಟ್ಟುತ್ತದೆ. ಅಪ್ಪಟ ಅಹಿಂಸಾವಾದಿಯಾಗಿ, ಶುದ್ಧ ಸಸ್ಯಾಹಾರಿಯಾಗಿರುವ ತಂದೆಗೆ ಧರ್ಮದ ಕಾರಣದಿಂದ ಮಗಳನ್ನೇ ತಿರಸ್ಕರಿಸುವಷ್ಟು ಮಾನವೀಯ ಅಂತಃಕರಣ ಬತ್ತಿ ಹೋಯಿತೆಂದರೆ, ಅದೆಂತಹ ಧರ್ಮ ಇರಬೇಕುಲ ಎಂಬ ತಿರಸ್ಕಾರ ಹುಟ್ಟುತ್ತದೆ.[3]

ಆ ಧರ್ಮದ ಎಲ್ಲಾ ಆಚಾರವಿಚಾರಗಳಲ್ಲೂ ದೋಷ ಸಂಕುಚಿತತೆ, ಮೌಢ್ಯ, ಕ್ರೌರ್ಯ ಮತ್ತು ಸ್ವಾರ್ಥವೇ ಕಾಣತೊಡಗಿ, ಎಲ್ಲ ಪತ್ರಿಕೆ, ಭಾಷಣ ಲೇಖನ ಮೊದಲಾದವುಗಳಲ್ಲಿ ಹಿಂದೂ ಧರ್ಮವನ್ನು ಟೀಕಿಸುವ ಕಡೆಗಣಿಸುವ ಪ್ರವೃತ್ತಿ ಬೆಳೆಯುತ್ತದೆ.

ಪ್ರಗತಿಪರ ಮನೋವೃತ್ತಿಯ ಯಾವ ಧರ್ಮದಲ್ಲೂ ನಂಬಿಕೆ ಇಲ್ಲದ ಅವಳಿಗೆ ತಾನು ಸ್ವೀಕರಿಸಿದ ಧರ್ಮ ವಿಶ್ವ ಭ್ರಾತೃತ್ವದ ತಳಹದಿಯ ಮೇಲೆ ಕಟ್ಟಿದ ಯಾವ ಕಟ್ಟುಪಾಡುಗಳೂ ಇಲ್ಲದ ಆಧುನಿಕ ಸಮತಾವಾದದ ತಿರುಳನ್ನು ಹದಿನಾಲ್ಕು ನಾಲ್ಕು ನೂರು ವರ್ಷಗಳಷ್ಟು ಹಿಂದೆಯೇ ಬೋಧಿಸಿದ ಧರ್ಮವಾಗಿ ಕಾಣತೊಡಗುತ್ತದೆ.

ತಮ್ಮ ಧರ್ಮದಲ್ಲಿನ ಯಾವುದೇ ಅಂಶದ ವಿರುದ್ಧ ಮಾತನಾಡುವ ಯಾರೇ ಆಗಲಿ ಸಾಮಾಜಿಕವಾಗಿ ಮಾಡಬೇಕಾದ ಕ್ಷಮಾಯಾಚನೆ, ನೀಡಬೇಕಾದ ತಪ್ಪುದಂಡ ಒಳಗಾಗಬೇಕಾದ ಚೂರಿಯೇ ಮೊದಲಾದ ಶಿಕ್ಷೆ. ಕಠಿಣ ಕ್ರಮಗಳು ಅವಳಿಗೆ ಆ ಧರ್ಮದ ಆತ್ಮಗೌರವದ ಕವಚವಾಗಿ ಕಾಣುತ್ತದೆಯೆ ಹೊರತು, ತಮ್ಮ ಧರ್ಮದ ವಿರುದ್ಧ ಮಾತನಾಡುವವರು ಧೈರ್ಯವನ್ನು ಉಡುಗಿಸುವ, ಭಯದ ವಾತಾವರಣವನ್ನು ಸೃಷ್ಟಿಸುವ, ವ್ಯಕ್ತಿಯ ಅಭಿಪ್ರಾಯ ಸ್ವಾತಂತ್ರ್ಯವನ್ನು ಅಪಹರಿಸುವ ಭಯಾನಕ ಧರ್ಮವಾಗಿ ಕಾಣುವುದಿಲ್ಲ. ಮಗು ಹುಟ್ಟಿದಾಗ ನಡೆಸುವ ಅಕೀಕ್ ದಿನದಲ್ಲಿ ಐದು ಬಾರಿ ಮತ್ತು ಶುಕ್ರವಾರದಂದು ಮಾಡಲೇಬೇಕಾದ ನಮಾಜ್ ರಂಜಾನಿನ ಉಪವಾಸ ಕಟ್ಟಲೆ, ಪ್ರಾಣಿ ಬಲಿ, ಹೆಣ್ಣುಮಕ್ಕಳು ಧರಿಸಲೇಬೇಕಾದ ಬುರ್ಖಾ, ತಬ್ಲೀಘ್‌ನವರು ನಡೆಸುವ ಬೇಹುಗಾರಿಕೆ, ಮೂರು ಬಾರಿ 'ತಲಾಕ್ ಹೇಳುವ ಮೂಲಕ ಮದುವೆಯಾದ ಹೆಣ್ಣಿನಿಂದ ಸುಲಭವಾಗಿ ಪಡೆಯಬಹುದಾದ ವಿಚ್ಛೇದನ ಇತ್ಯಾದಿ ರೀತಿ ರಿವಾಜುಗಳು ಪ್ರಾರಂಭದಲ್ಲಿ ಆತಗೌರವದ ರಕ್ಷೆಗಳಾಗಿ ಕಂಡು ಬರುತ್ತವೆ.

ಇಷ್ಟಾದರೂ ಫಿಲ್ಮ್ ವಲಯದಲ್ಲಿದ್ದ ಆಕೆಯ ಕೆಲವು ನಡುವಳಿಕೆಗಳು 'ತಬ್ಲೀಘ್'ನವರ ವಿಚಾರಣೆಗೆ ಒಳಪಟ್ಟಾಗ, ಮುಜುಗರಕ್ಕೊಳಗಾದ ಅವಳು ಆ ಬಗ್ಗೆ ಗಂಡನ ನೆರವು ಬಯಸಿದಾಗ ಅವನು ಟ್ಯಾಕ್ಟ್‌ಫುಲ್ ಆಗಿ ನಡೆದುಕೊಳ್ಳುವಂತೆ ಆಕೆಗೆ ಬುದ್ಧಿ ಹೇಳುವುದರ ಮೂಲಕ ತನ್ನ ಮತಧರ್ಮಗಳ ಪರ ವಹಿಸತೊಡಗಿದಾಗ ವೈಚಾರಿಕತೆಯ ತಳಹದಿಯ ಮೇಲೆ ಪಡೆದು ಬಂದ ಶಿಕ್ಷಣ ಆಕೆಯಲ್ಲಿ ವಿಚಾರ ಜಾಗೃತಿಯನ್ನುಂಟುಮಾಡುತ್ತದೆ.

ಇದುವರೆಗೆ ಆತ್ಮಗೌರವದ ರಕ್ಷೆಗಳೆಂದು ಭಾವಿಸಿದ್ದ ಧರ್ಮದ ಕಟ್ಟುಪಾಡುಗಳೊಂದಿಗೆ, ತನ್ನ ಹುಟ್ಟಿನ ಧರ್ಮವನ್ನು ಹೋಲಿಸತೊಡಗುತ್ತದೆ. ಯಾವ ಧಾರ್ಮಿಕ ಕಟ್ಟುಪಾಡುಗಳೂ ಇಲ್ಲದೆ ತಮಗೆ ಬೇಕೆನಿಸಿದರೆ ಗುಡುಗಿ ಹೋಗಬಹುದು, ಹೋಗದಿರಬಹುದು. ತಮಗೆ ತೋಚಿದಂತೆ ದೇವರುಗಳ ಟೀಕೆಟಿಪ್ಪಣಿ ಮಾಡಬಹುದು ಸುಲಭವಾಗಿ ಮತ್ತೊಂದು ಧರ್ಮಕ್ಕೆ ಮತಾಂತರಗೊಳ್ಳಬಹುದು.

ತಮಗೆ ಇಷ್ಟಬಂದ ದೇವರನ್ನು ಪೂಜಿಸಬಹುದು. ಇಂಥಾ ಅಭಿವ್ಯಕ್ತಿ ಸ್ವಾತಂತ್ರ್ಯವುಳ್ಳ ಧರ್ಮ ತನ್ನದು ತಾನು ಬಿಟ್ಟು ಬಂದ ಧರ್ಮದ್ದು ಎಂಬ ತಿಳುವಳಿಕೆ ಅವಳಲ್ಲಿ ಮೂಡತೊಡಗಿದಂತೆ ಅವರಿಬ್ಬರಲ್ಲಿ ಬದುಕು ಮೂಡತೊಡಗುತ್ತದೆ.

ಹಂಪಿಯ ಸಾಕ್ಷ್ಯ ಚಿತ್ರದ ಬಗ್ಗೆ ಸ್ಕ್ರಿಪ್ಟ್ ಬರೆಯಲು ಹೊರಟಾಗ ಅವಳಿಗೆ ವೇದ್ಯವಾದ ಸತ್ಯ ಸಂಗತಿಗಳು ಅವಳನ್ನು ಮತ್ತಷ್ಟು ಚಿಂತನೆಗೆ ಹಚ್ಚಿ ಬರವಣಿಗೆ ಸ್ತಬ್ಧಗೊಳ್ಳುತ್ತದೆ. ಈ ಮಧ್ಯ ತಬ್ಲಿಘ್‌ನವರ ಭಯದಿಂದ, ಮನೆಯಲ್ಲಿನ ಇತರರಿಗೆ ತೊಂದರೆಯಾಗಬಾರದೆಂದು ಅತ್ತೆ ಮಾವಂದಿರವರಿಂದ ದೂರವಾಗಿ, ಬೇರ ಫ್ಲಾಟಿನಲ್ಲಿ ವಾಸಿಸುವ ವೇಳೆಗೆ ಇಬ್ಬರ ಮನಸ್ಸು ಮುರಿದು ತಲಾಕ್‌ಶ್ರಿ ಹೇಳುವ ಮಟ್ಟ ಮುಟ್ಟುತ್ತದೆ. ಆದರೆ ಅವಳೂರಿನವರೂ ತಂದೆಯ ಸ್ನೇಹಿತರೂ ತನಗೆ ಆಪ್ತರೂ ಆದ ಪ್ರೊ. ಶಾಸ್ತ್ರಿಯವರ ಮಧ್ಯಸ್ಥಿಕೆಯಿಂದ ತಲಾಕ್‌ಶ್ರಿ ಅರ್ಥದಲ್ಲಿಯೇ ನಿಲ್ಲುತ್ತದೆ. ಈ ಗೊಂದಲಗಳಲ್ಲಿ ಮಗು ನಜಿರ ಅಜ್ಜ ತಾತಂದಿರ ವಾತ್ಸಲ್ಯದ ಆರೈಕೆಯಲ್ಲಿ ಬೆಳೆದು ಮುಂದೆ ಅಮೆರಿಕಾದಲ್ಲಿ ಉನ್ನತ ಶಿಕ್ಷಣ ಪಡೆದು, ಸೌದಿಯಲ್ಲಿ ನೌಕರಿಯಲ್ಲಿರುತ್ತಾನೆ. ಹೀಗೆ ಇಪ್ಪತ್ತೆಂಟು ವರ್ಷಗಳು ಕಳೆಯುವ ವೇಳೆಗೆ ಅವಳ ತಂದೆ ನಿಧನರಾದ ವಾರ್ತೆ, ಹದಿನೈದು ದಿನಗಳನಂತರ ಅವಳಿಗೆ ತಿಳಿದು ಬರುತ್ತದೆ. ತಂದೆಯ ಸಂದರ್ಭದವನ್ನೇ ಕಳೆದುಕೊಂಡು ಇಪ್ಪತ್ತೆಂಟು ವರ್ಷಗಳಾಗಿದ್ದರೂ ಸಾವಿನ ಸುದ್ಧಿ ಅವಳನ್ನು ಜರ್ಝರಿತಗೊಳಿಸುತ್ತದೆ. ಇಪ್ಪತ್ತೆಂಟು ವರ್ಷಗಳು ಅದುಮಿ ಹಿಡಿದಿದ್ದ ನೋವು, ಸಂಕಟ, ದುಃಖ, ಉದ್ವೇಗಗಳು ಒಮ್ಮೆಲೆ ಹೊರಹೊಮ್ಮಿ, ತಾನು ತಂದೆಗೆ ತಕ್ಕ ಮಗಳಾಗಲಿಲ್ಲ ಎಂಬ ಸತ್ಯ ಗೋಚರವಾಗಿ ನನ್ನ ಬೇರು ಕತ್ತರಿಸಿ ಹೋಗಲಿಲ್ಲ, ನನ್ನನ್ನು ತಿರಸ್ಕರಿಸಿತು ಎಂಬ ಅರಿವಾಗಿ ಹಂಬಲಿಸುತ್ತಾಳೆ.

ತನಗೆ ಸುದ್ಧಿ ಮುಟ್ಟಿಸಲು ಊರಿನಿಂದ ಆಳನ್ನು ಕಳುಹಿಸಿದ್ದರು ಎಂಬ ಸಂಗತಿ ಪ್ರೊಫೆಸರರಿಂದ ತಿಳಿದಾಗ ಹಾಗೆ ಹೇಳಿ ಕಳುಹಿಸಲು ಕಾರಣವೇನಾದರೂ ಇರಲೇಬೇಕೆಂದು ತಿಳಿದು ತನ್ನೊಂದಿಗೆ ಬರಲು ಸಿದ್ಧನಾದ ಗಂಡನನ್ನು ತಡೆದು ತನ್ನ ತವರೂರಾದ ನರಸಾಪುರಕ್ಕೆ ಧಾವಿಸುತ್ತಾಳೆ.

ನರಸಾಪುರಕ್ಕೆ ಬಂದನಂತರ ಅವಳ ಬದುಕಿನ ದಿಕ್ಕೆ ಬದಲಾಗುತ್ತದೆ. ತಂದೆಯ ಆಸ್ಥಿ ಕೊಡಲು ಪಶ್ಚಿಮ ವಾಹಿನಿಗೆ ತಂದೆಯ ಸ್ನೇಹಿತರೂ ಆಪ್ತರೂ ಆದ ಶಾಸ್ತ್ರಿಗಳೊಂದಿಗೆ ಹೋಗುವ ಮೊದಲು, ಧರ್ಮಾಂತರಗೊಂಡ ಅವಳು ಪ್ರಾಯಶ್ಚಿತ ಕರ್ಮಕ್ಕೆ ಸ್ವಇಚ್ಛೆಯಿಂದ ಒಳಗಾಗುತ್ತಾಳೆ. ಕೊನೆಯ ದಿನಗಳಲ್ಲಿ ತಂದೆ ಸಂಗ್ರಹಿಸಿ, ಅಭ್ಯಸಿಸಿ, ಟಿಪ್ಪಣಿ ಮಾಡಿಟ್ಟ ಗ್ರಂಥ ಸಂಗ್ರಹಾಲಯ ಇವಳ ಆಸಕ್ತಿ ಕೇಂದ್ರಗಳಾಗಿ, ಅವನ್ನು ಅಭ್ಯಸಿಸುವ ಮನಸ್ಸು ಮಾಡುತ್ತಾಳೆ.

ಈ ಮಧ್ಯೆ ಬೆಂಗಳೂರಿಗೆ ಹಿಂದಿರುಗಿದ ಅವಳಿಗೂ ಅಮೀರನಿಗೂ ತಂದೆಯ ಆಸ್ಥಿ ಕದಡಲು ಅವಳು ಒಳಗಾದ ಪ್ರಾಯಶ್ಚಿತ್ತ ಕರ್ಮದ ಬಗ್ಗೆ ಇಬ್ಬರಲ್ಲಿಯೂ ಮನಸ್ತಾಪ ಹೆಚ್ಚಾಗುತ್ತದೆ. ತಂದೆಯು ಸಂಗ್ರಹಿಸಿ ಟಿಪ್ಪಣಿ ಮಾಡಿಟ್ಟಿರುವ ಅಪೂರ್ವ ಗ್ರಂಥಗಳನ್ನು ಅಭ್ಯಸಿಸುವ ಆಸೆಯಿಂದ, ತಾನು ಬರೆಯಬೇಕಾಗಿದ್ದ ಇತರ ಸ್ಕ್ರಿಪ್ಟ್ ತವರಿನ ಬಗ್ಗೆ ಅಧ್ಯಯನ ನಡೆಸುವ ಉದ್ದೇಶದಿಂದ ಕೆಲಕಾಲ ಹಳ್ಳಿಯಲ್ಲಿ ನೆಲಸುವ ನಿರ್ಧಾರ ಮಾಡುತ್ತಾಳೆ. ಮಧ್ಯ ಕೆಲವೊಂದು ಸಾರಿ ಬೆಂಗಳೂರಿಗೆ ಬಂದು ಹೋದರೂ, ಇಬ್ಬರ ಸಂಬಂಧವೂ ಮತ್ತಷ್ಟು ಬಿಗಡಾಯಿಸಿ, ಅಮೀರನ ಮರುಮದುವೆಯಲ್ಲಿ ಪರ್ಯವಸಾನಗೊಳ್ಳುತ್ತದೆ. ಆದರೆ ರಜಿಯಾಳಿಗೆ ಒಮೆ ತಲಾಕ್ ಹೇಳಿದರೂ ಫಿಲ್ಮ್‌ನಲ್ಲಿರುವ ತಾನು ಹಿಂದು ಹೆಂಡತಿಗೆ ಅದರಲ್ಲೂ ಅದೇ ಇಂಡಸ್ಟ್ರಿಯಲ್ಲಿ ಹೆಸರು ಮಾಡಿರುವ ಹೆಣ್ಣಿಗೆ ಪ್ರಗತಿಪರ ವಿಚಾರವಾದಿಯೆಂದು ಹೆಸರು ಮಾಡಿರುವ ತಾನು ತಲಾಕ್ ನೀಡುವ ಕಾರ್ಯ ಪೂರ್ಣಗೊಳಿಸಿದರೆ ಅದು ತನಗೇ ಮುಂದೆ ಮುಳುವಾಗಬಹುದೆಂಬ ಪ್ರೊಫೆಸರ್ ಬುದ್ಧಿಮಾತಿನಿಂದ ಅಮೀರ್ ಮತ್ತು ಅವಳ ವೈವಾಹಿಕ ಸಂಬಂಧ ಹಾಗೆ ಉಳಿದಿರುತ್ತದೆ. ಇದಾವುದರ ಪರಿವೆಯಿಲ್ಲದ ಲಕ್ಷ್ಮಿ ತಂದೆ ಗಳಿಸಿ ಉಳಿಸಿಟ್ಟಿರುವ ಆಸ್ತಿಯೇ ಸಾಕಷ್ಟಿರುವಾಗ ಸಂಪಾದನೆಯ ಚಿಂತೆ ಇಲ್ಲದೆ ತವರೂರಿನಲ್ಲಿ ಅಧ್ಯಯನದಲ್ಲಿ ತೊಡಗುತ್ತಾಳೆ.

ತಂದೆ ಮಾಡಿಟ್ಟ ಟಿಪ್ಪಣಿಗಳು ಮತ್ತು ಅದರ ಆಧಾರ ಗ್ರಂಥಗಳ ಅಧ್ಯಯನ ಅವಳ ಚಿಂತನೆಯ ದಿಕ್ಕನ್ನೇ ಬದಲಿಸುತ್ತದೆ. ಮಧ್ಯಕಾಲಿನ ಭಾರತದ ಮೇಲೆ ನಡೆದ ಮುಸ್ಲಿಂ ಆಕ್ರಮಣದ ವಿವರಗಳು ಅವಳಿಗೆ ಸತ್ಯದ ಬೆಳಕನ್ನು ತೋರಿಸುತ್ತದೆ. ಸರ್ಕಾರವು ನೀಡುವ ಧನ ಸಹಾಯಕ್ಕಾಗಿ ಆಸೆಪಟ್ಟು, ಅವರ ರಾಜಕೀಯ ಉದ್ದೇಶಕ್ಕನುಗುಣವಾಗಿ ರಾಷ್ಟ್ರವೀರ, ಅನ್ಯ ಧರ್ಮಸಹಿಷ್ಣು ಎಂಬೆಲ್ಲ ರೀತಿಯಲ್ಲಿ ಬಿಂಬಿಸಹೊರಟ ಟಿಪ್ಪು, ಔರಂಗಜೇಬ ಮೊದಲಾದ ಮುಸ್ಲಿಂ ದೊರೆಗಳನ್ನು ಕುರಿತು ಅದಕ್ಕೆ ತಕ್ಕಂತೆ ಪಾತ್ರಗಳನ್ನು ಬಿಂಬಿಸುವ ನಾಟಕ ರಚನೆ ಅವಳಿಗೆ ಸಾಧ್ಯವಾಗುವುದಿಲ್ಲ. ಸರ್ಕಾರದ ಪ್ರಚಾರಕ್ಕೆ ತಕ್ಕಂತೆ ಐತಿಹಾಸಿಕ ಸತ್ಯವನ್ನು ಮರೆಮಾಚಿ, ಸತ್ಯದ ಅಭಿವ್ಯಕ್ತಿಯಾಗಿರಬೇಕಾದ ಕಲೆಯನ್ನು ಬೇರೆಯಾವ ಉದ್ದೇಶಕ್ಕೋ ದುಡಿಸಿಕೊಂಡು ಕಲೆಗೆ ದ್ರೋಹವೆಸಗಲಾರದೆ ಸ್ಕ್ರಿಪ್ಟ್ ಬರೆಯುವುದನ್ನೇ ನಿಲ್ಲಿಸುತ್ತಾಳೆ.

ಪ್ರೊ. ಶಾಸ್ತ್ರಿಗಳ ಮೊದಲಾದ ಪ್ರಗತಿಪರರೆಂದು ಬುದ್ಧಿಜೀವಿಗಳೆಂದು ಬ್ರಾಂಡ್ ಹೊತ್ತಿರುವ ಇತಿಹಾಸಕಾರರ ಹೇಳಿಕೆಯಂತೆ, ಶೈವರು ವೈಷ್ಣವರು ಪರಸ್ಪರ ಉದ್ದೇಶ್ಯದಿಂದ ಕಾದಾಡಿ, ಹಿಂದೂಗಳ ದೇವಾಲಯಗಳನ್ನು ನಾಶಪಡಿಸಿರುವ ಸಂಗತಿಗಳನ್ನು ಇಂದಿನ ಕೆಲವು ಮತಾಂಧರು ಇತಿಹಾಸಕಾರರ ಸೋಗಿನಲ್ಲಿ ಈ ಕೃತ್ಯವನ್ನು ಮುಸಲ್ಮಾನರ ತಲೆಗೆ ಕಟ್ಟಿ ದ್ರೋಹವೆಸಗುತ್ತಿದ್ದಾರೆ ಎಂಬ ಆಧುನಿಕ ವ್ಯಾಖ್ಯಾನಕಾರರು ಸೃಷ್ಟಿಸಿದ ಅಡ್ಡಹಾದಿಯಲ್ಲಿ ನಡೆಯಲು ಅವಳ ಮನಸ್ಸು ಒಪ್ಪುವುದಿಲ್ಲ.

ಇದುವರೆಗೆ ತಾನು ನಡೆದು ಬಂದ ಸಿದ್ಧಾಂತ, ಚಳುವಳಿ, ಆದರ್ಶಗಳಿಂದ ಬಿಡಿಸಿಕೊಂಡು, ಭೂತಕಾಲದ ಘಟನೆಗಳನ್ನು ವಸ್ತುನಿಷ್ಠವಾಗಿ ನೋಡುವುದೇ ನಿಜವಾದ ಇತಿಹಾಸವೆಂಬ ಅರಿವಾಗುತ್ತದೆ. ಸತ್ಯ ಘಟನೆಗಳನ್ನು ಬಿಂಬಿಸುವ ಕೆಲವು ಪಾತ್ರಗಳ ಮೂಲಕ ಸತ್ಯಘಟನೆಗಳನ್ನು ಬಿಂಬಿಸುವ ಒಂದು ಚಿತ್ರಕಥೆ ಬರೆಯಲು ನಿರ್ಧರಿಸುತ್ತಾಳೆ. ಅದಕ್ಕಾಗಿ ಸಮಗ್ರ ಭಾರತದ ಮೂಲೆಮೂಲೆಗಳಲ್ಲೂ ಸಂಚರಿಸಿ, ಚಿತ್ರೀಕರಣದ ಮೂಲಕ ನೇರ ಕ್ಷೇತ್ರ ಕಾರ್ಯ ನಡೆಸುವ ಉದ್ದೇಶದಿಂದ, ತನ್ನ ಹಳೆಯ ಸ್ಕ್ರಿಪ್ಟ್ ಬರೆಯುವ ಕಾರ್ಯದಿಂದ ಪೂರ್ತಿಯಾಗಿ ವಿಮುಖಳಾಗುತ್ತಾಳೆ.

**ಕೊನೆ ಟಿಪ್ಪಣಿಗಳು**

೧. ಬಾಲಸುಬ್ರಹ್ಮಣ್ಯ ಕಂಜರ್ಪಣೆ 'ಆವರಣ'ದ ಒಳಗಣ ಅನಾವರಣ, ಸಂ. : ಎಲ್. ಎಸ್. ಶೇಷಗಿರಿರಾವ್, ಆವರಣ ಅವಲೋಕನ ೨೦೦೭, ಬೆಂಗಳೂರು, ಪುಟ ೧೧೧

೨. ಎಸ್. ಎಲ್. ಭೈರಪ್ಪ, 'ಆವರಣ' ೨೦೦೭. ಸಾಹಿತ್ಯ ಭಂಡಾರ ಬೆಂಗಳೂರು, ಪುಟ: ೧೯

೩. ಅದೇ, ಪುಟ: ೨೧.

೪. ಅದೇ, ಪುಟ: ೧೬೫.

# ಅಧ್ಯಾಯ ೧೦
# ಭೈರಪ್ಪನವರ ಕಾದಂಬರಿಗಳ ಕೆಲವು ಮುಖ್ಯ ವಿಚಾರಗಳು

ಭೈರಪ್ಪನವರ ಕಾದಂಬರಿಗಳಲ್ಲಿ ಬರುವ ಧರ್ಮ ವಿಚಿಕಿತ್ಸೆ ಧಾರ್ಮಿಕ ಸಂಸ್ಕೃತಿಯು ಸನಾತನ ತತ್ವಮೌಲ್ಯಗಳ ಆವಾಹನೆಯನ್ನು ಅವರ ಈ ಮತಾಂತರದ ಹಿನ್ನೆಲೆಯಲ್ಲಿ ಗಮನಿಸಬೇಕು.[೧]

ಆದರೆ ಈ ಬಗೆಯಾಗಿ ಹಿಂದೂ ಸನಾತನ ಸಂಸ್ಕೃತಿಯು ಆಕರ್ಷಣೆಯು ಅವರ ಆತಕ್ಕೆ ಆಪ್ಯಾಯಮಾನವಾಗಲು ಇನ್ನೂ ಒಂದು ಕಾರಣವಿರಬೇಕು. ಅವರಲ್ಲಿ ಹಿಂದಿನಿಂದಲೂ ಒಂದು ಬಗೆಯ ನಿರ್ಲಿಪ್ತ ಅಂತರ್ಮುಖ ಪ್ರವೃತ್ತಿಯು ಅಂತರಾಳದಲ್ಲಿ ಎಲ್ಲಿಯೋ ಕೆಲಸ ಮಾಡುತ್ತಿರಬೇಕು. ಅದೇಕೋ ಭೈರಪ್ಪನವರಲ್ಲಿ ಸನ್ಯಾಸದ ಬಗೆಗೆ ಬಲವಾದ ಒಲವು ಇದ್ದಂತಿದೆ. ಅವರ ಬಹಳಷ್ಟು ಕಾದಂಬರಿಗಳಲ್ಲಿ ಒಂದಲ್ಲ ಒಂದು ಪಾತ್ರವು ಕೊನೆಗೋ ಮೊದಲಿಗೋ ಸನ್ಯಾಸಿಯಾಗಿ ಹೋಗುತ್ತದೆ. 'ನಿರಾಕರಣ'ದ ವಿಷಯವೇ ಸನ್ಯಾಸ. ಅದರ ವಿನ್ಯಾಸ ಮತ್ತು ವೈಫಲ್ಯ, ಗ್ರಹಣದ ವಿಷಯ. ಸನ್ಯಾಸಿಯ ಐಂದ್ರಯಿಕ ಪತನ, ಅದರಿಂದ ಅವನ ಸ್ವಸ್ವರೂಪ ಪ್ರಾಪ್ತಿ. ವಂಶವೃಕ್ಷದ ಪ್ರೋ ಕೊನೆಗೆ ಸನ್ಯಾಸಿಯಾಗಿ ತೆರಳುವರು. ಅದೇ ಬಗೆಯ ಕೊನೆ ನಾಯಿ ನೆರಳಿನಲ್ಲಿ ಧರ್ಮಶ್ರೀಯ ನಾಯಕನ ತಂದೆ ಒಂದು ರೀತಿ ಅವಧೂತ. ಮನೆ ಮಾರು ಬಿಟ್ಟು ಭೈರಾಗಿಯಾಗಿ ಓಡಿ ಹೋಗುತ್ತಾನೆ. ದಾಟು ಕಾದಂಬರಿಯಲ್ಲಂತೂ ವೆಂಕಟರಮಣಯ್ಯ, ಅವನ ಮಗಳು ಕಥಾನಾಯಕಿ ಸತ್ಯ, ಸನ್ಯಾಸ ಅಥವಾ ವಾನಪ್ರಸ್ಥ ಜೀವನವನ್ನು ಮನೆಯಿಂದ ದೂರವಾಗಿ ತೋಟದಲ್ಲಿ ಗುಡಿಸಲು ಕಟ್ಟಿಕೊಂಡು ಉಳಿದು ಕಳೆಯುತ್ತಾರೆ. ಆವರಣದಲ್ಲಿ ಲಕ್ಷ್ಮಿಯೂ ಸಹಿತ ತಂದೆ ತೀರಿ ಹೋದ ಮೇಲೆ ಹಳ್ಳಿಗೆ ಬಂದು ಏಕಾಂಗಿಯಾಗಿ ಜೀವನ ನಡೆಸುತ್ತಾಳೆ.[೨]

ಒಂದು ಮಾತು ನಿಜ, ಭೈರಪ್ಪನವರು ತಮ್ಮ ಅನೇಕ ಕಾದಂಬರಿಗಳಲ್ಲಿ ಹಿಮಾಲಯದ ಉನ್ನತ ಗಂಭೀರ ಏರಿಳಿತ, ಹರಿದ್ವಾರ, ಬದರಿ, ಕೇದಾರ, ಬನಾರಸ್, ಗಂಗಾ ಮುಂತಾದ ಎಡೆಗಳ ವಿಶೇಷ ಆಕರ್ಷಣೆ ಅವರಲ್ಲಿ ಒಂದು ಬಗೆಯ ಆಸಕ್ತಿಯ ಬಗೆಯಾಗಿ ಅನೇಕ ಕಾದಂಬರಿಗಳಲ್ಲಿ ಬಲವಾಗಿ ಕಾಣಿಸಿಕೊಳ್ಳುತ್ತದೆ. ಅಲ್ಲಿಯ ಅಂಥ ಮನೋವೃತ್ತಿಯ ಪಾತ್ರಗಳು ನಿರುಪಾಯವಾಗಿ  ಸಾಮಾಜಿಕತೆಯ ಸಾಂಸಾರಿಕತೆಯ ಸಂಗಡ ಒಡಂಬಡಿಕೆ ಮಾಡಿಕೊಳ್ಳುತ್ತವೆ. ಮನೆ ಮಾರು ಬಿಟ್ಟು ಹೋದವರು ಅಸಹಾಯಕರಾಗಿ ಮರಳಿ ಬರುತ್ತಾರೆ.

ವ್ಯಕ್ತಿ ಸಮಾಜಜೀವಿ ಸಮಾಜವನ್ನು ಬಿಟ್ಟು ಬದುಕಲಾರ. ಯಾವುದೇ ಒಂದು ಸಮಾಜವು ಧರ್ಮ, ನೀತಿ ನಿಯಮಗಳು, ಆಚಾರ ಸಂಪ್ರದಾಯಗಳು ಇವೇ ಮೊದಲಾದವುಗಳಿಂದ ಬಿಗಿಯಲ್ಪಟ್ಟಿರುತ್ತದೆ. ಇವುಗಳಿಂದ ಸಮಾಜವು ವ್ಯಕ್ತಿಯನ್ನು ನಿಯಂತ್ರದಲ್ಲಿಟ್ಟಿರುತ್ತದೆ. ಆದರೆ ಒಂದು ಕಾಲದ ಈ ರೀತಿ, ನಿಯಮ, ಸಂಪ್ರದಾಯ

ನಡುವಳಿಕೆಗಳು ಸದಾಕಾಲವೂ ಸತ್ವಯುತವಾಗಿರುವುದಿಲ್ಲ. ಅವು ಸತ್ವಹೀನವಾದಂತೆಲ್ಲಾ ವ್ಯಕ್ತಿಯು ಅವುಗಳಿಂದ ನುಣುಚಿಕೊಳ್ಳಲು ಪ್ರಯತ್ನಿಸುತ್ತಾನೆ. ಹೊಸ ಆಚರಣೆ, ಪದ್ಧತಿ ಮುಂತಾದವುಗಳನ್ನು ಸೃಜಿಸಲು ಹಾತೊರೆಯುತ್ತಾನೆ. ಆದರೆ ಅಷ್ಟು ಬೇಗ ಹಳೆಯದನ್ನು ಬಿಡಲಾರ, ಹಳಿಯಲಾರ. ಹೊಸ ಮತ್ತು ಹಳೆಯ ಮೌಲ್ಯಗಳನ್ನು ಅವನಲ್ಲಿ ತಿಕ್ಕಾಟವನ್ನಾರಂಭಿಸುತ್ತವೆ. ಇಂತಹ ಸಂಕ್ರಮಣ ಕಾಲದಲ್ಲಿರುವ ನಮ್ಮ ಸಮಾಜದ ಸ್ಥಿತಿಗತಿಗಳನ್ನು, ಸಮಸ್ಯೆಗಳನ್ನು, ಭೈರಪ್ಪನವರು ತಮ್ಮ ಕೃತಿಗಳಿಗೆ ವಸ್ತುವನ್ನಾಗಿ ಆರಿಸಿಕೊಂಡಿದ್ದಾರೆ. ಭೈರಪ್ಪನವರ ಇಲ್ಲಿಯವರೆಗಿನ ಕೃತಿಗಳತ್ತ ನೋಟ ಹರಿಸಿದಾಗ ವಸ್ತು ವೈವಿಧ್ಯತೆಯಲ್ಲಿ ಅನೇಕ ಸಮಸ್ಯೆಗಳ ಸಂಘರ್ಷಣೆಯನ್ನು ಕಾಣಬಹುದು.

ಭೈರಪ್ಪನವರ ಬಹುತೇಕ ಕಾದಂಬರಿಗಳಂತೆ ಈ ಕಾದಂಬರಿಯೂ ಕೂಡ ಸಿದ್ಧ ವಸ್ತುವಿನಿಂದಾದುದು. ಕಾದಂಬರಿಯ ಒಳಗೇ ಎಲ್ಲ ಪಾತ್ರಗಳೂ ಬೆಳೆಯುವುದಿಲ್ಲ. ಒಂದು ರೀತಿಯಲ್ಲಿ ನೇರವಾಗಿ ಹೋಗುತ್ತಿರುತ್ತವೆ. ಆದ್ದರಿಂದಲೇ ಆವರಣ ಕಾದಂಬರಿಯಲ್ಲಿಯ ಪಾತ್ರಗಳಲ್ಲಿ ನಾವು ಸಂಕೀರ್ಣತೆಯನ್ನು ಗುರುತಿಸುವುದು ಕಷ್ಟವಾಗುತ್ತದೆ. ಆದರೆ ಭೈರಪ್ಪನವರು ಅವಕ್ಕೆ ಧರ್ಮ, ಜಾತಿಯ, ಮುಖವಾಡ ಹಾಕಿ ಓದುಗನನ್ನು ಮರುಳು ಮಾಡುತ್ತಾರೆ.

ಭೈರಪ್ಪನವರ ಕಾದಂಬರಿಗಳನ್ನು ಕಲಾತ್ಮಕವಾಗಿ ಪರಿಶೀಲಿಸ ಹೊರಟ ಓದಿಗರಿಗೆ ನಿರಾಶೆಯಾಗುತ್ತದೆ. ಏಕೆಂದರೆ, ಅವರು ತಮ ಕಾದಂಬರಿಗಳ ಅನುಭವ ದ್ರವ್ಯವನ್ನು ಸಂಕೀರ್ಣಗೊಳಿಸಿ ಅದಕ್ಕೆ ಕಲಾತಕ ಅಭಿವ್ಯಕ್ತಿಯನ್ನು ನೀಡುವುದಿಲ್ಲ ಅಂದರೆ ಪಾತ್ರಗಳನ್ನು ಸರಳೀಕರಣಗೊಳಿಸಿಬಿಡುತ್ತಾರೆ. ಇದಕ್ಕೆ ಸ್ವಲ್ಪಮಟ್ಟಿಗೆ ಅಪವಾದ ಎಂದರೆ, ವಂಶವೃಕ್ಷ, ಗೃಹಭಂಗ ಮತ್ತು ದಾಟು. ವಂಶವೃಕ್ಷದಲ್ಲಿ ಕಲಾತ್ಮಕತೆ ಅಲ್ಲಲ್ಲಿ ಮಿಂಚಿದೆ. ಗೃಹಭಂಗದಲ್ಲಿ ವಾಸ್ತವತೆ ಮತ್ತು ಕಲೆಗಾರಿಕೆ ಅಲ್ಲಲ್ಲಿ ಇದ್ದದನ್ನು ಕಾಣುತ್ತೇವೆ.

'ದಾಟು' ಕಾದಂಬರಿಯಲ್ಲಿ ವಸ್ತುವಿನ ಆಯ್ಕೆ ಮತ್ತು ನಿರೂಪಣೆಯಲ್ಲಿ ಬದಲಾವಣೆ ತೋರುತ್ತದೆ. ನಮ ದೇಶದ ಶ್ರದ್ಧಾಪರಂಪರೆಗೆ ಕಟ್ಟುಬಿದ್ದ ಭೈರಪ್ಪನವರ ಸಂವೇದನಾ ಕ್ಷೇತ್ರವು ಸಂಕುಚಿತವಾಯಿತು. ಆದ್ದರಿಂದ ಅವರ ಹೆಚ್ಚು ಕಾದಂಬರಿಗಳಲ್ಲಿ ಹೆಚ್ಚು ಕಡಿಮೆ ಒಂದೇ ಬಗೆಯ ಪಾತ್ರಗಳನ್ನು, ಸನ್ನಿವೇಶಗಳ ನಿರ್ಮಾಣ ಮತ್ತು ವಿವರಣೆಗಳನ್ನು, ಚರ್ಚೆ ಪೋಷಣೆಗಳನ್ನು ಕಾಣುತ್ತೇವೆ. ಆದ್ದರಿಂದ ಅವುಗಳಿಗೆ ಓದುಗರನ್ನು ವೈವಿಧ್ಯಪೂರ್ಣವಾದ ಅನುಭವವ ಪ್ರಪಂಚದಲ್ಲಿ ಬೇರೆ ಬೇರೆ ಕಡೆಗಳಿಂದ ಸಂಧಿಸುವ ಸಾಮರ್ಥ್ಯ ಹೆಚ್ಚಾಗಿಲ್ಲ ಎಂದೆನ್ನಬೇಕಾಗುತ್ತದೆ.

ಭೈರಪ್ಪನವರಲ್ಲಿ ಕಾದಂಬರಿಕಾರನಿಗೆ ಬೇಕಾದ ಪ್ರಜ್ಞೆ, ಸಾಮಗ್ರಿ ಮತ್ತು ಜ್ಞಾನ ಇವು ಮೂರು ಇವೆ. ಆದರೆ ಬರಹಗಾರನಿಗೆ ಈ ಮೂರು ಅಂಶಗಳ ಜೊತೆಗೆ ಬೇಕಾದ ನಿರ್ಲಿಪ್ತತೆ, ಪಾತ್ರಗಳ ಗುಣಾವಗುಣಗಳನ್ನು ನಿರೀಕ್ಷಿಸಿ ಪರಿಶೀಲಿಸಿ ಪರೀಕ್ಷೆಗೊಳಪಡಿಸಿ ನೋಡಲು ಬೇಕಾದ ಕಾಳಜಿ ಇಲ್ಲವೆಂದು ತೋರುತ್ತದೆ. ಆಳವಾದ ಅಧ್ಯಯನ ಮತ್ತು ಚಿಂತನೆಗಳ ಹಿನ್ನೆಲೆಯಲ್ಲಿ ಕಾದಂಬರಿಗಳನ್ನು ನಿರ್ಮಿಸುತ್ತಿರುವ ಭೈರಪ್ಪನವರು, ಪರಸ್ಪರ ವಿರೋಧಿ ಪ್ರವೃತ್ತಿಗಳನ್ನೂ ಮುಖಾಮುಖಿಯಾಗಿರಿಸಿ ಅವುಗಳಲ್ಲಿ ಸಂಘರ್ಷವನ್ನುಂಟು ಮಾಡುವ ಸಂದರ್ಭದಲ್ಲಿ ಸನ್ನಿವೇಶಗಳನಲೂ ಘಟನೆಗಳನ್ನೂ ನಿರ್ಮಿಸಿ, ಅವುಗಳನ್ನು ವಿವರಿಸುತ್ತಲೇ ಹೋಗುತ್ತಾರೆ. ಅಂದರೆ ಕಥೆ ಹೇಳುತ್ತಲೇ ಹೋಗುತ್ತಾರೆ. ಇದರಿಂದ ಸಂಘರ್ಷ ಸಂಕೀರ್ಣಮಟ್ಟಕ್ಕೇರುವುದಿಲ್ಲ. ಇದರಿಂದ ಭೈರಪ್ಪನವರಿಗೆ ಪಾತ್ರಗಳ ಅಂತರಂಗವನ್ನು ಪ್ರವೇಶಿಸಿ, ಅಂದರೆ ಪಾತ್ರಗಳ ಮನಸ್ಸಿನೊಳಗೆ ನುಗ್ಗಿ ಅವುಗಳ ಸೂಕ್ಷಾತಿಸೂಕ್ಷ ಅನುಭವಗಳನ್ನು

ಕೆದಕಿ ಕೆರಳಿಸಿ ಅವುಗಳಿಗೆಲ್ಲ ಭಾಷೆಯಲ್ಲಿ ಕಲಾತ್ಮಕ ಅಭಿವ್ಯಕ್ತಿಯನ್ನು ನೀಡಲು ಸಾಧ್ಯವಾಗುತ್ತಿಲ್ಲ. ಅಂದರೆ ಯಾವ ವಿಶಿಷ್ಟ ಭಾವನೆಗಳನ್ನು ಓದುಗನಲ್ಲಿ ಪ್ರಚೋದಿಸಬೇಕೋ, ಅಂಥ ಭಾವನೆಗಳನ್ನು ಮೂಡಿಸುವ ಸನ್ನಿವೇಶ, ಘಟನೆ ಮತ್ತು ವಾತಾವರಣಗಳನ್ನು ಕಾದಂಬರಿಕಾರ ನಿರ್ಮಿಸುವುದು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಭೆರಪ್ಪನವರ ಪ್ರಜ್ಞಾಪ್ರಪಂಚ, ಜ್ಞಾನಸಂಪತ್ತು ಮತ್ತು ಸಾಮಗ್ರಿ ಪರಿಕರಗಳು ಕಲೆಯ ದೃಷ್ಟಿಯಿಂದ ಪರಿಪೂರ್ಣವಾದ ಕೃತಿಯೊಂದನ್ನು ನೀಡಲು ಶಕ್ತವಾಗಿಲ್ಲ. ಯಾಕೆಂದರೆ ಕಾದಂಬರಿಯಲ್ಲಿ, ಕಲಾತ್ಮಕ ಸಿದ್ಧಿಯನ್ನು ಪಡೆಯಲು ಇವು ಮೂರೂ ದುಡಿಯುವದಿಲ್ಲ. ಇದಕ್ಕೆ ಕಾರಣ ಭೆರಪ್ಪನವರ ಕವಿಟ್‌ಮೆಂಟ್‌ವಿರಬಹುದು.

'ಆವರಣ'ದಲ್ಲಿ ಓದುಗನನ್ನು ಕಾದಂಬರಿಯಲ್ಲಿ ಮಗ್ನನಾಗುವಂತೆ ಮಾಡುವ ಗುಣ ಇಲ್ಲ. ಅನುಭವ ದ್ರವ್ಯವು ಕಲಾತ್ಮಕ ಅಭಿವ್ಯಕ್ತಿಯನ್ನು ಭಾಷೆಯಲ್ಲಿ ಪಡೆಯಲು ಸಾಧ್ಯವಾಗಿಲ್ಲ. ಕಾದಂಬರಿಕಾರನ ವೈಚಾರಿಕತೆ ಕಾದಂಬರಿಯಲ್ಲಿ ನಿಷ್ಠುರ ಪರೀಕ್ಷೆಗೆ ಒಳಗಾಗಿಲ್ಲ. ಆದ್ದರಿಂದ ಭೈರಪ್ಪನವರು ತಮ್ಮ ಪ್ರಜ್ಞೆಸಾಮಗ್ರಿ, ಮತ್ತು ಜ್ಞಾನ ಸಂಪತ್ತನ್ನು ಲೇಖಕನಿಗೆ ಬೇಕಾದ ನಿರ್ಲಿಪ್ತತೆ, ಪಾತ್ರಗಳ ಗುಣಾವಗುಣಗಳನ್ನು ನಿರೀಕ್ಷಿಸಿ ಪರಿಶೀಲಿಸಿ ಪರೀಕ್ಷೆಗೊಳಪಡಿಸಿ ನೋಡಲು ಬೇಕಾದ ಕಾಳಜಿಯ ಜೊತೆಯಲ್ಲಿ ಉಪಯೋಗಿಸಿದರೆ ಮಾತ್ರ, ಮತ್ತು ತಮ ಕಮಿಟ್‌ಮೆಂಟ್ ಧೋರಣೆಯನ್ನು ಕಲಾತ್ಮಕ ಕೃತಿಗಳನ್ನು ನಿರ್ಮಿಸುವುದರಲ್ಲಿ ದುಡಿಸಿಕೊಳ್ಳಲು, ವೈಚಾರಿಕತೆಯನ್ನು ಕೃತಿಗಳಲ್ಲಿ ನಿಷ್ಠುರ ಪರೀಕ್ಷೆಗೆ ಒಳಪಡಿಸಲು ಪ್ರಯತ್ನಿಸಿದರೆ ಮಾತ್ರ ಅವರಿಂದ ಉತ್ತಮ ಕಲಾಕೃತಿಗಳು ಬೆಳಕಿಗೆ ಬರುತ್ತವೆ ಎನ್ನುವುದರಲ್ಲಿ ಸಂದೇಹವಿಲ್ಲ.

ಭೈರಪ್ಪನವರ ಕಾದಂಬರಿಗಳಲ್ಲಿ ಚಿತ್ರಿಸಿದ ಸ್ತ್ರೀ ಪಾತ್ರಗಳಲ್ಲಿ ಕಷ್ಟಸಹಿಷ್ಣುತೆ, ದಯೆ, ವೈಜ್ಞಾನಕತೆ ಅಥವಾ ಅತಿವಾಸ್ತವಿಕತೆ, ಪ್ರಾಮಾಣಿಕತೆ ಮೊದಲಾದ ಜೀವನದಲ್ಲಿ ಅನುಷ್ಠಾನಕ್ಕೆ ತರಲು ಕಷ್ಟಸಾಧ್ಯವಾದ ಮೌಲ್ಯಗಳನ್ನು ಪ್ರತಿನಿಧಿಸುವವರು ಕೆಲವರಾದರೆ, ಹೊಸ ಮೌಲ್ಯದ ಬಗ್ಗೆ ವಿಶ್ವಾಸ ಮೂಡಿ ಅದನ್ನು ಆಚರಣೆಯಲ್ಲಿ ತರಲು ಹೊರಟು ಸಂಘರ್ಷಕ್ಕೆ ಗುರಿಯಾಗಿಯೋ ಆಗದೆಯೋ, ತಾವು ಗಳಿಸುವ ಅನುಭವದಿಂದ ಸನಾತನ ಮೌಲ್ಯಕ್ಕೆ ಜೋತು ಬೀಳುವವರು ಕೆಲವರು. ಇನ್ನು ಕೆಲವರು ಹಳೆಯ ಮೌಲ್ಯಗಳನ್ನು ನಿರ್ವಿವಾದವಾಗಿ ಒಪ್ಪಿ ಜೀವಿಸುವವರು. ಹೊಸತನ್ನೇ ಪ್ರತಿನಿಧಿಸುವವರು ಬಹಳ ಕಡಿಮೆ.

ಇವರಲ್ಲಿ ಹೆಚ್ಚಿನವರು ಸ್ವಭಾವತಃ ಒಳ್ಳೆಯವರು. ವಿನಾಕಾರಣ ಯಾರಿಗೂ ಕೇಡು ಬಯಸುವವರಲ್ಲ. ಜಗಳ, ದ್ವೇಷ, ಹಿಂಸೆ ಮೊದಲಾದ ದುರ್ಗುಣಗಳು ಇವರಿಂದ ಬಹಳ ದೂರ. ಸ್ತ್ರೀ ಪಾತ್ರ ರಚನೆಯಲ್ಲಿನ ಈ ಕೊರತೆಯನ್ನು ತುಂಬಿಕೊಡುವವರು ಗಂಗಮ, ಕಮಲಿಯಂತಹ ಸಣ್ಣಪುಟ್ಟ ಪಾತ್ರಗಳು, ಮತ್ತು ಆವರಣದಲ್ಲಿಯ ಮುಖ್ಯ ಪಾತ್ರಗಳು. ಹೀಗಾಗಿ ಕಾದಂಬರಿಕಾರರು ಸ್ತ್ರೀ ಸ್ವಭಾವದ ಒಂದು ಮುಖದ ವಿವರಣೆಗೆ ಗಮನವಿಟ್ಟಂತೆ ಇನ್ನೊಂದೆಡೆಗೆ ಇತ್ತಿಲ್ಲವೆಂಬ ಅಂಶ ಗಮನಕ್ಕೆ ಬರುತ್ತದೆ. ಸ್ತ್ರೀಮನದ ವಿಶ್ಲೇಷಣೆಯಲ್ಲೂ ಕೆಲವು ಕಡೆ ಚೆನ್ನಾಗಿ ಮಾಡಿದ್ದಾರೆ ಎಂದು ಎನಿಸಿದರೂ, ಅವರಿಂದ ಪೂರ್ಣ ಯಶಸ್ಸನ್ನು ಪಡೆಯಲಾಗಿಲ್ಲ.

ಇವರ ಕಾದಂಬರಿಗಳಲ್ಲಿ ವಿವಾಹಿತ ಸ್ತ್ರೀಯರ ಸುಖ ದುಃಖಗಳು ಸಮಸ್ಯೆಗಳು ಹರಡಿಕೊಂಡ ಹಾಗೆ, ಅವಿವಾಹಿತರ ಅಸ್ವಸ್ಥತೆ ಸಮಸ್ಯೆಗಳು ಬಂದಿಲ್ಲ. ಅವಿವಾಹಿತರ ಚಿತ್ರಣ ಕಂಡು ಬರುವ ಒಂದೆರಡು ಕಾದಂಬರಿಗಳಲ್ಲೂ ಅದು ಪ್ರಣಯ, ಜಾತ್ರಿ ಸಮಸ್ಯೆಯಲ್ಲಿ ಸೀಮಿತಗೊಂಡಿವೆ.

ಹೀಗಾಗಿ ಇಂದಿನ ಸಾಹಿತ್ಯ ಪ್ರಪಂಚದಲ್ಲಿ ಕಾದಂಬರಿಯ ಪಾತ್ರ ಬಹು ದೊಡ್ಡದು. ಆದರೆ ಅದರ ಉಪಯೋಗ ಸರಿಯಾಗಿ ಆಗುತ್ತಿಲ್ಲ ಅಷ್ಟೆ. ಅಗ್ಗದ ಬೆಲೆಯ ಕಾದಂಬರಿಗಳನೇಕವು ನಮ್ಮ ಸಮಾಜವನ್ನು ತಿದ್ದುವ ಬದಲು, ಅದರ ಬೇರನ್ನೇ ಅಲುಗಾಡಿಸುತ್ತಿವೆ. ಜನತೆಯ ಅಭಿರುಚಿ ಸುಧಾರಿಸಿದರೆ ಮಾತ್ರ ಕಾದಂಬರಿಗಳ ಸುಧಾರಣೆ ಸಾಧ್ಯ.

**ಕೊನೆ ಟಿಪ್ಪಣಿಗಳು**

೧. ಮಾಧವ ಕುಲಕರ್ಣಿ, ಸಹಸ್ಪಂದನ, ೧೯೭೮, ಸಾಹಿತ್ಯ ಭಂಡಾರ ಬೆಂಗಳೂರು. ಪುಟ: ೭
೨. ಅದೇ, ಪುಟ: ೩೨೨.
೩. ಅದೇ, ಪುಟ: ೪೨೧.
೪. ಅದೇ, ಪುಟ: ೪೨೮.

## ಸಮಾರೋಪ

'ಆವರಣ' ಕಾದಂಬರಿಯಲ್ಲಿ ಮುಖ್ಯವಾಗಿ ಪ್ರತಿಪಾದಿಸಿದ್ದು ಹಿಂದೂ ಮತ್ತು ಮುಸ್ಲಿಂ ಮತದ ಬಗ್ಗೆ ಅದರಲ್ಲೂ ಮುಸ್ಲಿಂ ಮತವು ಹಿಂದೂ ಮತದ ಮೇಲೆ ಯಾವ ರೀತಿ, ಅತಿ ಕ್ರೂರವಾಗಿ, ಭಯಾನಕವಾಗಿ, ಅತಿ ಅಸಹ್ಯಕರವಾಗಿ ಆಕ್ರಮಣ ಮಾಡಿದೆ ಎಂಬಂತೆ ಚಿತ್ರಿಸಿದ್ದಾರೆ. ಅದನ್ನು ಲಕ್ಷ್ಮಿಯು ಮೂಲಕ ವ್ಯಕ್ತಪಡಿಸಿದ್ದಾರೆ. ಹಾಗೆಯೇ ಇದ್ದುದನ್ನು ಇಲ್ಲದಂತೆಯೂ ಇಲ್ಲದ್ದನ್ನು ಇದ್ದಂತೆಯೂ ಬಣ್ಣ ಕಟ್ಟಿ ಚಿತ್ರಿಸುವಲ್ಲಿ ಬಹು ಚಾಣಾಕ್ಷನಾದ ಪ್ರೊ. ಶಾಸ್ತ್ರಿಯನ್ನು ಸೃಷ್ಟಿಸಿದ್ದಾರೆ. ಶಾಸ್ತ್ರಿಯಂಥವರೇ ಇಂದು ಎಲ್ಲೆಲ್ಲೂ ತುಂಬಿ ತುಳುಕುತ್ತಿದ್ದಾರೆ. ಅಂಥವರಿಂದಲೇ ಸತ್ಯವು ಮರೆಯಾಗಿ ಅಸತ್ಯವು ಮರೆಯುತ್ತಿದೆ. ಕಾದಂಬರಿಯಲ್ಲಿ ಭೈರಪ್ಪನವರು ಬೇರೆ ಬೇರೆ ಜಾತಿಯ, ಬೇರೆ ಬೇರೆ ಮತದ, ಬೇರೆ ಬೇರೆ ದೇಶದ ಹೆಣ್ಣುಗಂಡುಗಳನ್ನು ಬೆಸೆದಿದ್ದಾರೆ. ಇದರಿಂದ ಜಾತೀಯ, ಮತೀಯ, ದೇಶೀಯ ಭೇದಭಾವವನ್ನು ಅಳಿಸಿ, ಮನುಕುಲವನ್ನು ಬೆಸೆದು ಒಂದುಗೂಡಿಸುವ ಆಸೆ ಭೆರಪ್ಪನವರಿಗೆ ಇರಬಹುದು. ಆದರೆ ಇದು ಕೈಗೂಡದ ಆಸೆ. ಅಲ್ಪಸ್ವಲ್ಪ ಒಂದಾದಂತೆ ಕಂಡುಬಂದರೂ ಸಂಪೂರ್ಣವಾಗಿ ಒಂದುಗೂಡಿಸುವುದು ಸಾಧ್ಯವೇ ಇಲ್ಲ.

ಈ ಕಾದಂಬರಿಯನ್ನು ಮೂರು ದಂಪತಿಗಳ ವೃತ್ತಾಂತವೆಂದು ಬಣ್ಣಿಸಬಹುದು ರಜಿಯಾ ಮತ್ತು ಅಮೀರ, ದೇವಗಢದ ರಾಜಕುಮಾರ ಮತ್ತು ಶ್ಯಾಮಲೆ, ಪ್ರೊ. ಶಾಸ್ತ್ರೀ ಮತ್ತು ಎಲಿಜಬೆತ್. ರಜಿಯಾ ಮತ್ತು ಅಮೀರರು ಎಲ್ಲ ಕನಸು, ಭ್ರಮೆಗಳನ್ನು ತೊರೆದು ಸತ್ಯವನ್ನು ಎದುರಿಸಲು ಸನ್ನದ್ಧರಾಗುವಷ್ಟರಲ್ಲಿ ಕಾದಂಬರಿ ಮುಗಿಯುತ್ತದೆ.

ರಾಜಕುಮಾರ ಮತ್ತು ಶ್ಯಾಮಲೆ, ಇವರು ಸರ್ವಸ್ವವನ್ನೂ ಕಳೆದುಕೊಂಡವರುದ ಸುಖದ ಮರಿಚಿಕೆಯೂ ಇಲ್ಲದೆ ಇನ್ನು ಬದುಕಿರುವಷ್ಟು ದಿನ ಸ್ವತಂತ್ರರಾಗಿದ್ದರೆ ಅಷ್ಟೇ ಸಾಕು ಎಂದು  ತಲೆ ತಪ್ಪಿಸಿಕೊಳ್ಳುವ ನಿರ್ಧಾರಕ್ಕೆ ಬಂದವರು. ಪ್ರೊ. ಶಾಸ್ತ್ರಿ ಎಲ್ಲ ನಂಬಿಕೆಗಳಿಂದ ಮುಕ್ತನಾಗಿದ್ದೇನೆಂಬ ಅನಿಸಿಕೆಯಲ್ಲಿ ಪ್ರಗತಿಯೊಂದನ್ನೇ ನಂಬಿಕೊಂಡವರುದ ಎಲಿಜಬೆತ್‌ಳಿಗೆ ತನ್ನ ಮತದ ನಂಬಿಕೆಗಳೇ ಮುಖ್ಯ.

ರಜಿಯಾಳ ವಿವಾಹಪೂರ್ವದ ಹೆಸರು ಲಕ್ಷ್ಮಿ. ಪುಣೆಯ ಫಿಲ್ಮ್ ಇನ್‌ಸ್ಟ್ಯೂಟ್‌ನ ಸಹಪಾಟಿ ಅಮೀರನನ್ನು ಮೆಚ್ಚಿ ಮದುವೆಯಾಗುವಾಗ ಆಕೆ ಹೆಸರು ಬದಲಾಯಿಸಬೇಕಾಯಿತು. ಮದುವೆಯನ್ನು ಒಪ್ಪದ ತಂದೆ ಮೊಮಗನನ್ನು ನೋಡಲಿಲ್ಲ. ಮಗಳನ್ನೂ ಶಾಶ್ವತವಾಗಿ ದೂರವಿಟ್ಟರು.

ಪ್ರೊ. ಶಾಸ್ತ್ರಿಗಳು ಪರದೇಶದಲ್ಲಿ ಓದಿ ಅಲ್ಲಿಯ ಬಿಳಿಹೆಣ್ಣನ್ನೇ ಮದುವೆಯಾಗಿ ತಾವು ಕ್ರಾಂತಿಕಾರರೂ, ಪ್ರಗತಿಪರರೂ ಎಂದು ತಮನ್ನು ತಾವೇ ಘೋಷಿಸಿಕೊಂಡು

ಮಹಾಮೇಧಾವಿ ಎನಿಸಿ ಪ್ರಚಾರ ಪ್ರೀಯರಾಗಿದ್ದರು. ಇದರಿಂದ ತಂದೆಯ ಕೋಪಕ್ಕೆ ಪಾತ್ರರಾಗಿ ತಂದೆಯಿಂದ ದೂರ ಇದ್ದರು. ಇಂತಹ ಹಿತಶತೃವನ್ನು ಲಕ್ಷ್ಮಿಯು ನಂಬಿದ್ದಳು. ಕಾರಣ ಅವರು ಸಮಾಜದಲ್ಲಿ ಬಹುವ್ಯಾಪಕ ಮತ್ತು ಪ್ರಭಾವಶಾಲಿಯಾಗಿದ್ದರು. ಮತ್ತು ಇವಳ ಅಂದಚಂದವನ್ನು ಹೊಗಳುತ್ತಾ ನೀನು ನಮ್ಮೂರ ಹುಡುಗಿ ನಿನ್ನನ್ನು ಮೊದಲೇ ನೋಡಿದ್ದರೆ ನಿನ್ನನ್ನೇ ಮದುವೆಯಾಗುತ್ತಿದ್ದೇನು ಎಂದು ಹೇಳುತ್ತ ತೀರಾ ಸಲುಗೆಯಿಂಗ ಸಮಯ ಸಿಕ್ಕಾಗ ಅವಳ ಭುಜದ ಮೇಲೆ ಕೈ ಆಲಂಗಿಸುತ್ತಾ ಕೊನೆಗೆ ಒಂದು ದಿನ ಮುತ್ತನ್ನೂ ಕೊಡುತ್ತಾನೆ. ಇದು ಅವಳಿಗೆ ಅಸಹ್ಯವೆನಿಸಿದರೂ ಅವರ ವಿರೋಧ ಕಟ್ಟಿಕೊಳ್ಳಬಾರದೆಂದು ಸಹಿಸಿಕೊಂಡು ಸುಮ್ಮನಿದ್ದಳು. ಹೀಗೆ ವಂಚಕ ಬುದ್ಧಿಯುಳ್ಳ ಶಾಸ್ತ್ರಿಯು ಅವಕಾಶವಾದಿಯಾಗಿದ್ದನು.

ಶಾಸ್ತ್ರಿಯು ಮೂಲಕ ತಂದೆಯ ಮರಣದ ವಿಚಾರವನ್ನು ಕೇಳಿದ ಲಕ್ಷ್ಮಿಯು ತನ್ನ ಊರಿಗೆ ಧಾವಿಸಿ ದೇವರ ಪೂಜಾರಿ ಶೇಷಶಾಸ್ತ್ರಿಗಳನ್ನು ಕಂಡು ಅವರ ಮುಂದೆ ತನ್ನ ತಂದೆಯು ಅಂತ್ಯ ಕಾಲದಲ್ಲಾದರೂ ತನ್ನನ್ನು ಕರೆಸಿಕೊಳ್ಳಬಹುದಿತ್ತಲ್ಲಾ ಎಂದು ತನ್ನ ಮನದ ಅಳಲನ್ನು ತೋಡಿಕೊಳ್ಳುತ್ತಾಳೆ.

ಲಕ್ಷ್ಮಿಯು ಶಾಸ್ತ್ರಿಗಳ ಮೂಲಕ ಮೂರು ದಿವಸ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ತಂದೆಯ ಚಿತಾಭಸವನ್ನು ನದಿಯಲ್ಲಿ ವಿಸರ್ಜಿಸಿ ಧ್ಯನಳಾದಳು. ಅಂದರೆ ಮಾನವನು ತನ್ನ ತನವನ್ನು ಬಿಟ್ಟು ಅದೆಷ್ಟು ದೂರ ಹೋದರೂ ಮತ್ತೆ ಅಲ್ಲಿಗೆ ಮರಳುತ್ತಾನೆ ಎಂದು ಕ್ಷ್ಮಿಯು ನಡತೆಯಿಂದ ಸಿದ್ಧವಾಗುತ್ತದೆ. ಸೌದಿಯಲ್ಲಿ ಕೆಲಸ ಮಾಡುವ ಕ್ಷ್ಮಿಯು ಮಗ ನಜೀರನು ತಾಯಿಗೆ ಪತ್ರ ಬರೆದು ಅಲ್ಲಿಯ ಆಚಾರವಿಚಾರನಡೆನುಡಿ ಪದ್ಧತಿಯನ್ನು ಅಲ್ಲಿ ವಂಚನೆ, ಹಾದರ, ಕಳವು ಇಲ್ಲವೇ ಇಲ್ಲವೆಂದು ತಿಳಿಸುತ್ತಾನೆ.

ಸರ್ಕಾರದ ಆದೇಶದ ಪ್ರಕಾರ ಅಮೀರನು ಅಕಪರ ಮಹಾನ್ ಮತ್ತು ರಾಷ್ಟ್ರವೀರ ಟಿಪ್ಪುವಿನ ನಾಟಕ ಬರೆಯಲು ತಿರಸ್ಕರಿಸುತ್ತಾಳೆ. ಶಾಸ್ತ್ರಿಯು ಲಕ್ಷ್ಮಿಗೆ ಫೋನ್ ಮಾಡಿ ವಿಜಯನಗರ ಪತನಕ್ಕೆ ಶೈವ ವೈಷ್ಣವರ ಕಿತ್ತಾಟವೇ ಕಾರಣವಲ್ಲದೇ, ಮುಸಲ್ಮಾನರು ಕಾರಣವಲ್ಲವೆಂದು ಸ್ಪಷ್ಟಪಡಿಸುತ್ತಾನೆ. ಇದು ಇಸ್ಲಾಂ ಪಕ್ಷಪಾತಿಯಾದ ಶಾಸ್ತ್ರಿಯ ಅಭಿಪ್ರಾಯ.

ಸೋತವರನ್ನು ಮುಘಲ್ಲರು ಬಹು ಕೆಟ್ಟದಾಗಿ ನಡೆಸಿಕೊಳ್ಳುತ್ತಿದ್ದರು. ಗಂಡು ಹೆಣ್ಣು ಇಬ್ಬರನ್ನು ಗುಲಾಮರನ್ನಾಗಿ ಮಾಡಿಕೊಳ್ಳುತ್ತಿದ್ದರು. ಅದರಲ್ಲೂ ದೇವಗಢದ ಯುವರಾಜನನ್ನು ನಪುಂಸಕನನ್ನಾಗಿ ಮಾಡಿ ಹೆಣ್ಣಿನಂತೆ ಭೋಗಿಸುತ್ತಿದ್ದರು. ಒಬ್ಬರಲ್ಲ ಅನೇಕರು. ಹಿಂದೂಗಳಿಗೆ ಅಧಿಕ ಕಂದಾಯ ಅದರಲ್ಲೂ ತಲೆಗಂದಾಯ ಬೇರೆ. ಕಂದಾಯ ಕಟ್ಟದವರು ಗುಲಾಮರಾಗಬೇಕಿತ್ತು.

ಮುಸ್ಲಿಮರಲ್ಲಿ ಹೆಣ್ಣು ಗಂಡಿಗೆ ಸಮಾನತೆ ಇಲ್ಲ. ಹೆಣ್ಣು ಕೇವಲ ಅಡಿಗೆ ಮನೆ ಮತ್ತು ಮಲಗುವ ಮನೆಗೆ ಸೀಮಿತವಾಗಿರಬೇಕೆಂದು ಅವರು ಬಯಸುತ್ತಾರೆ. ಬಾಬರ್ ಮಸೀದಿ ಧ್ವಂಸವಾಗಿ ಅನೇಕ ವರ್ಷಗಳು ಕಳೆದವು. ಆದರೂ ಅದನ್ನು ಇನ್ನೂ ಜೀವಂತವಾಗಿ ಇಟ್ಟಿದ್ದಾರೆ. ಇಟ್ಟವರು ನಮ್ಮವರೇ ಹೊರತು ಅವರಲ್ಲ. ಆದರೆ ಬಾಬರನು ಕಟ್ಟಿದ್ದು ಹೇಗೆ ಎಂಬುದನ್ನು ಯಾರೂ ಚಿಂತಿಸುವುದಿಲ್ಲ.

ಮುಘಲರು ಹಿಂದುಗಳನ್ನು ಕಾಫಿರ್‌ರು, ಧರ್ಮಲಂಡರು, ದುರ್ಬಲರು, ಒಗ್ಗಟ್ಟಿಲ್ಲದವರೆಂದು ಜರಿಯುತ್ತಿದ್ದರು. ಇವರಲ್ಲಿ ಒಗ್ಗಟ್ಟು ಇದ್ದಿದ್ದರೆ ಅವರಿಗೆ ಇಲ್ಲಿ ರಾಜ್ಯ

ಸ್ಥಾಪಿಸಲು ಸಾಧ್ಯವಾಗುತ್ತಿತ್ತೆಲ ನಮ್ಮಲ್ಲಿ ಸಂಪತ್ತಿಗೆ ಬರಗಾಲವಿಲ್ಲ. ವಿದೇಶೀಯರು ಅದೆಷ್ಟೋ ಸಲ ಕೊಳ್ಳೆ ಹೊಡೆದರೂ ಕಡಿಮೆಯಾಗಿಲ್ಲ. ಆಗುವುದಿಲ್ಲ ಆದರೂ ಬಡವರಿದ್ದಾರೆ. ಇದಕ್ಕೆ ಕಾರಣ ಆಳುವವರು, ಬಂಡವಾಳಶಾಹಿಗಳು. ಶಿವಾಜಿಯು ಬಹಳ ಬುದ್ಧಿವಂತ, ಚಾಣಾಕ್ಷ, ವೀರ, ಧೀರ ಮತ್ತು ಉಪಾಯಗಾರನು. ಆದ್ದರಿಂದ ಅವನು ಮುಘಲರಿಗೆ ಬಿಸಿ ಮುಟ್ಟಿಸಿದನು. ಔರಂಗಜೇಬನ ಬಂಧನದಿಂದ ತಪ್ಪಿಸಿಕೊಂಡನು.

ದೇವಗಢದ ಗುಲಾಮ ಮತ್ತು ಅವನ ಪತ್ನಿ ಶ್ಯಾಮಲೆಯು ಅವರಿಬ್ಬರು ಅನುಭವಿಸಿದುದನ್ನು ನೆನಸೆದರಿ ರಕ್ತವು ಕುದಿಯುತ್ತದೆ. ಲಕ್ಷ್ಮಿಯು ಮಗ ನಜೀರನು ಸೌದಿಯಿಂದ ನೇರವಾಗಿ ತಾಯಿ ಬಳಿಗೆ ಬಂದವನು ತಮ ದೇವನ ಶ್ರೇಷ್ಠ ಮಿಕ್ಕ ದೇವರು ಕನಿಷ್ಠವೆಂದು ವಾದಿಸುತ್ತಾನೆ. ಜಗತ್ತಿನಲ್ಲಿ ಇರುವವನು ಒಬ್ಬನೇ ದೇವನೆಂದು ಆ ತಿಳಿಗೇಡಿಗೆ ಹೇಗೆ ತಿಳಿಯಬೇಕು ಮತ್ತು ಕ್ಷುದ್ರ ದೇವತೆಗಳಿಂದಲೇ ಭಾರತವು ದರಿದ್ರವಾಗಿದೆ ಎನ್ನುತ್ತಾನೆ. ದರಿದ್ರತೆಗೆ ದುಡಿಯದೆ ಸೋಮಾರಿಯಾಗಿರುವುದೇ ಕಾರಣ. ದುಡಿಯುವವನು ಯಾವತ್ತೂ ದರಿದ್ರನಾಗಲಾರ.

ಶಾಸ್ತ್ರಿಗೆ ಹೆಂಗಸರನ್ನು ಮುಟ್ಟುವ, ಆಲಂಗಿಸುವ ಕೆಟ್ಟ ಚಟವಿದೆ. ಇದು ವಿದೇಶಿ ಸಂಸ್ಕೃತಿ ಇದು ಭಾರತದಲ್ಲಿ ನಡೆಯಬಾರದು. ಕಾಶಿ ಅಮೇರಿಕ ಮತ್ತು ಕರ್ನಾಟಕದಿಂದ ಪ್ರೊ. ಶಾಸ್ತ್ರಿಗಳಿಗೆ ಉಪನ್ಯಾಸ ನೀಡಲು ಕರೆ ಬಂದಿದೆ. ಅದೇ ಸಮಯಕ್ಕೆ ಲಕ್ಷ್ಮಿಯು ಮೂಲಕ ತಾಯಿಯ ಮರಣದ ವಾರ್ತೆಯೂ ಬರುತ್ತದೆ. ತಕ್ಷಣ ಅಲ್ಲಿ ಶ್ರಾದ್ಧ ವಿಚಾರವೂ ಬರುತ್ತದೆ. ತಂದೆಯೂ ಒಪ್ಪುತ್ತಾರೆ ಆದರೆ ಅದಕ್ಕೆ ಪಶ್ಚಾತ್ತಾಪ ಮಾಡಿಕೊಳ್ಳಬೇಕು. ಅದನ್ನು ಪತ್ರಿಕೆಗಳ ಮೂಲಕವೂ ಪ್ರಕಟಿಸಬೇಕೆಂಬ ಶರತ್ತನ್ನು ವಿಧಿಸಿ ಪಶ್ಚಾತ್ತಾಪದ ವಿಧಿಯನ್ನೂ ವಿವರಿಸುತ್ತಾರೆ. ಅದಕ್ಕೆ ಪ್ರತಿಕ್ರಿಯೆ ನೀಡದ ಶಾಸ್ತ್ರಿ ಕಾರು ಹತ್ತಿ ಗಲ್ಲಿಗೆಬಂದು ಹೊಟ್ಟೆ ಬಿರಿಯುವಂತೆ ತಿಂದು ಬೇಸರ ಕಳೆಯುತ್ತದೆಂದು ಭಾವಿಸುವುದು ಮೂರ್ಖತನವಾಗುತ್ತದೆ.

ಅಜ್ಜಿಯ ಅಸ್ಥಿಯನ್ನು ವಿಸರ್ಜಿಸಲು ಸುಬ್ಬಣ್ಣ ಆತನ ಪತ್ನಿ ಮತ್ತು ಲಕ್ಷ್ಮಿಯು ಕಾಶಿಗೆ ಬರುತ್ತಾರೆ. ಅಲ್ಲಿ ರಿಕ್ಷಾ ಎಳೆಯುವ ಶರ್ಮನ ಮೂಲಕ ಮುಘಲರು ಮಾಡಿದ ಅತ್ಯಾಚಾರವನ್ನು ಬ್ರಾಹಣರ ಕಗ್ಗೊಲೆಯನ್ನೂ ತಿಳಿದುಕೊಂಡು ಸಂಕಟಪಡುತ್ತಾರೆ.

ಒಂದು ದಿನ ಶಾಸ್ತ್ರಿಗಳು ಇವರ ಕಣ್ಣಿಗೆ ಬೀಳುತ್ತಾರೆ. ಆಗ ಅವರು ಶ್ರಾದ್ಧ ಮಾಡಲೆಂದೇ ಬಂದಿದ್ದರೂ ಕೂಡಾ ಬೇರೆ ಕೆಲಸಕ್ಕೆ ಬಂದಿದ್ದೇನೆಂದು ಸುಳ್ಳು ಹೇಳುತ್ತಾರೆ.

ಗುಲಾಮನಾದ ದೇವಗಢದ ಯುವರಾಜನು ಕಾಶಿಯನ್ನು ನೋಡಿ ಅಹಮದುಲ್ಲಾನಂದ ಮುಘಲರು ಮಾಡಿದ ಅನ್ಯಾಯ, ಅತ್ಯಾಚಾರ, ನಳಂದಾ, ಚಕ್ಷಶಿಲೆಗಳ ವಿನಾಶ, ಗ್ರಂಥಗಳ ನಾಶ ಮುಂತಾದ ಅವರ ಕ್ರೂರ ಕೃತ್ಯಗಳನ್ನು ತಿಳಿದು ಕುದಿದನಾದರೂ ಸುಜ್ಞಾನಗಳೆಂದು ಕೊಚ್ಚಿಕೊಳ್ಳುವ ಇಸ್ಲಾಂ ಮತದವರಿಂದ ಅಜ್ಞಾನಿಗಳು ಮಾಡುವ ಕೆಲಸವೇ ಎಂದು ಚಿಂತಿಸುತ್ತಾನೆ. ಸಾಧುವಿನ ಹೇಳಿಕೆ ಪ್ರಕಾರ ಹಿಂದುಗಳಲ್ಲಿ ಆತಬಲವಿದೆ. ಅವರು ಸುಮ್ಮಸುಮ್ಮನೆ ಕೆಣಕುವುದಿಲ್ಲ. ನಮ ಋಷಿ ಮುನಿಗಳೂ ಕೆಟ್ಟ ವಿಚಾರವನ್ನು ಬೋಧಿಸುವುದಿಲ್ಲ. ಕೆಟ್ಟದ್ದನ್ನು ಬೋಧಿಸಿದವನು ಪ್ರವಾದಿ ಹೇಗಾಗುತ್ತಾನೆ ಇಂತಹ ಕೆಟ್ಟ ಮತವನ್ನು ಕೆಟ್ಟದೆಂದು ಒಪ್ಪಿಕೊಳ್ಳದೆ ಅದನ್ನು ಶ್ರೇಷು ಎಂದು ಬೊಗಳೆಬಿಡುವ ಶಾಸ್ತ್ರಿಗೆ ಏನೆನ್ನಬೇಕು ಇದೆಲ್ಲವನ್ನು ನೋಡಿ ಲಕ್ಷ್ಮಿಗೆ ಸಹಿಸಲಾಗುವುದಿಲ್ಲ.

ಕಾಶಿಯಿಂದ ಮರಳಿದ ಮೇಲೆ ಗುಲಾಮನ ಮನಸ್ಸು ಮತ್ತಷ್ಟು ಗಟ್ಟಿಯಾಗುತ್ತದೆ. ಈಗ ಶ್ಯಾಮಲೆಯನ್ನು ಹೊಂದಿ ಮುಘಲರ ಮೇಲೆ ಸೇಡು ತೀರಿಸಿಕೊಳ್ಳಬೇಕೆನ್ನುತ್ತಾನೆ.